ಶ್ರೀ ರೇವಣಸಿದ್ಧ ಶಿವಾಚಾರ್ಯ ಗ್ರಂಥ ಮಾಲಾ—೧೧

# ಶ್ರೀಶೈಲ ಹಾಗೂ ಮಹನಂದಿ ಕ್ಷೇತ್ರ ಮಹತ್ವ





ಗ್ರಂಥ ಕರ್ತರು, ಪ್ರಕಾಶಕರು :

ಶ್ರೀ ಷ| ಬ್ರ| ರೇವಣಸಿದ್ಧ ಶಿವಾಚಾರ್ಯ

ಮಹಾಸ್ವಾಮಿಗಳು ಚಿಕ್ಕಮಣ್ಣೂರ.

೧೯೭೨ ] [ ಬೆಲೆ ೧ ರೂಪಾಯಿ

# ಶ್ರೀಶೈಲ ಹಾಗೂ ಮಹಾನಂದ ಕ್ಷೇತ್ರಗಳ

## — ಮಹತ್ವ —



ಗ್ರಂಥಕರ್ತರು—ಪ್ರಕಾಶಕರು :

ಗದಗ ಶ್ರೀ ಜಗದ್ಗುರು ರೇಣುಕಾಚಾರ್ಯ ಮಂದಿರ ಸಂಸ್ಥಾಪಕರೂ ಧರ್ಮಬೋಧ ಶಿರೋಮಣಿ ಹಾಗೂ ಆಚಾರ್ಯತತ್ವ ಪ್ರಚಾರಕ ಪದವೀ ವಿಭೂಷಿತರೂ ಆದ ಶ್ರೀ ಷ| ಬ್ರ| ಪಂಡಿತ ಶ್ರೀ ರೇವಣಸಿದ್ಧ ರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು ಗುರು ಸಂಸ್ಥಾನ ಬೃಹನ್ಮಠ ಚಿಕ್ಕಮಣ್ಣೂರ.

ರೇಣುಕ ನಗರ ಮುಕ್ಕಾಂ ಗದಗ.

# ಸಮರ್ಪಣ



ಧಾರವಾಡ ಜಿಲ್ಲಾ ರೋಣ ತಾಲೂಕ ಪೈಕಿ ಚಿಕ್ಕಮಣ್ಣೂರ ಗ್ರಾಮದ ಬೃಹನ್ಮಠಾಧ್ಯಕ್ಷರಾದ ಶ್ರೀ ವೇ|| ಅಡಿವೇಂದ್ರ ಸ್ವಾಮಿಯವರು ಇವರ ಧರ್ಮಪತ್ನಿಯವರಾದ ಶ್ರೀ ಭಸ್ಮಾಂಕಿತ ಸೌ|| ಗುರುಸಿದ್ಧವ್ವನವರು ಈ ದಂಪತಿಗಳು ಪೂಜಾನಿಷ್ಠರಿದ್ದು ಜ್ಞಾನೋದಯ ಉಳ್ಳವರಾಗಿ ಗುರು ಮಠಕ್ಕೆ ಬಂದ ಭಕ್ತಮಹೇಶ್ವರರಿಗೆ ಅನ್ನೋದಕವನ್ನು ಕೊಟ್ಟು ಯಾರಿಗೂ ಸಾಧಕ–ಬಾಧಕಗಳನ್ನು ಕೊಡದೆ ತಮ್ಮ ಅಮೋಘವಾದ ವಾಣಿಯಿಂದ ಸತ್ಯತನವನ್ನೇ ಮಾತನಾಡುತ್ತ ಬಹು ಪರೋಪಕಾರಿಗಳಾಗಿ ಶಿವ ಸಾಯುಜ್ಯವನ್ನು ಹೊಂದಿರುವ ಕಾರಣ ಹಾಗೂ ಗ್ರಂಥಕರ್ತರ ಪಿತೃ ಮಾತಾದಿಗಳೇ ಇವರು ಆಗಿರೋಣದರಿಂದ ಇವರ ಸ್ಮರಣಾರ್ಥವಾಗಿ ಈ ಗ್ರಂಥದ ಕುಸುಮವನ್ನು ಬಹು ಪ್ರೇಮದಿಂದ ಇವರೀರ್ವರಿಗೆ ಸಮರ್ಪಿಸಲ್ಪಟ್ಟಿದೆ.

—ತಮ್ಮ ಪ್ರೇಮಾಭಿಲಾಷಿ

ಶ್ರೀ ಪೂಜ್ಯ ಚಿಕ್ಕಮಣ್ಣೂರ
ಮಹಾಸ್ವಾಮಿಗಳು.

# ಮುನ್ನುಡಿ

ಭಾರತ ಮಹಾಶಯರೆ ? ಕರ್ನೂಲ ಜಿಲ್ಲಾ ಪೈಕಿ ಆಂಧ್ರ ದೇಶದಲ್ಲಿ ಬಹು ಪುರಾತನವಾದ ಶ್ರೀಶೈಲ ಮಹಾ ಕ್ಷೇತ್ರವು ಯುಗ-ಯುಂಗಾತರ ಗಳಲ್ಲಿ ಹುಟ್ಟಿದ ಕ್ಷೇತ್ರವಿರುತ್ತೆ. ಈ ಕ್ಷೇತ್ರದಲ್ಲಿ ಮಹಾ ಮಹಿಮರಾದ ಋಷಿಪುಂಗರು—ರಾಜಾಧಿರಾಜರು— ಮಲ್ಲಾಂಬೆಯಾದ ಶಿವಶರಣೆಯು ಅಕ್ಕಮಹಾದೇವಿಯು ತಪೋನುಷ್ಠಾನ ಮಾಡಿದ ಪುಣ್ಯಕ್ಷೇತ್ರವಾಗಿದೆ. ಶ್ರೀಶೈಲ ಕ್ಷೇತ್ರದಲ್ಲಿಯೇ ವೀರಶೈವ ಮಹಾ ಮತಸ್ಥಾಪನಾಚಾರ್ಯರಾದ ಶ್ರೀ ೧೦೦೮ ಜಗದ್ಗುರು ಪಂಡಿತಾರಾಧ್ಯ ಶಿವಾಚಾರ್ಯರು ಶ್ರೀ ಮಲ್ಲಿ ಕಾರ್ಜುನ ಲಿಂಗದಲ್ಲಿಯೇ ಪ್ರಾದುರ್ಭವಿಸಿ ವೀರಶೈವ ಮತವನ್ನು ಸ್ಥಾಪನೆ ಮಾಡಿದರು. ಪಂಚಪೀಠಗಳಲ್ಲಿ ಒಂದಾದ ಶ್ರೀಶೈಲ ಕ್ಷೇತ್ರ ಸಿಂಹಾ ಸನವು ಈಗ್ಯೂ ಸೂರ್ಯನಂತೆ ಬೆಳಗುತ್ತಿರುವದು ಪ್ರಸಿದ್ಧವೇ ಅದೆ. ಹಿಂದಕ್ಕೆ ಪರಕೀಯ ಧರ್ಮದವರ ಆರ್ಭಟವೇ ಬಹಳವಾಗಿದ್ದು ಇಲ್ಲಿ ವೀರ ಶೈವರ ಸಭೆಗಳು ನಡೆಯದೇ ಇದ್ದವು. ಇದನ್ನು ಕೆಲ ಜನ ಪ್ರಮುಖ ಭಕ್ತಮಾಹೇಶ್ವರರು ಹಾಗೂ ಶ್ರೀಶೈಲದಲ್ಲಿ ವಾಸಿಸಿರುವ ಶ್ರೀ ವೇ|| ಸ್ವಾಮಿ ಬಸಯ್ಯನವರು ಆಲೋಚಿಸಿ ತಾ. ೧೮—೨—೧೯೩೩ ನೇ ಶನಿವಾರ ಸಾಯಂಕಾಲ ೪ ಘಂಟೆ ಸಮಯದಲ್ಲಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಯ ಮುಖ ಮಂಟಪದಲ್ಲಿ ನಮ್ಮ ಅಕ್ಷತೆಯ ಕೆಳಗೆ ಸಭೆಯನ್ನು ಮಾಡಿಸಿದ್ದರು. ಆ ಸಮಯದಲ್ಲಿ ಶ್ರೀಶೈಲ ಕ್ಷೇತ್ರದ ಸಮಾಚಾರವನ್ನು ಬರೆದುಕೊಂಡು ಬಂದಿ ದ್ದೆವು. ಈ ಮಹಾಕ್ಷೇತ್ರದ ಸಂಕ್ಷಿಪ್ತ ಮಹತ್ವ ಬರೆಯಬೇಕೆಂದು ಬಹು ದಿವಸಗಳವರೆಗೆ ಸಂಕಲ್ಪಿಸಿ ಬರದಿದ್ದೇವೆ. ಹಾಗೂ ಕೆಲ ಮಂಗಲ ಶ್ಲೋಕ ಗಳನ್ನು ಸಹಿತ ಪ್ರಕಟಿಸಿದ್ದೇವೆ. ಈ ಸುಗಮವಾದ ಈ ಕ್ಷೇತ್ರದ ಮಹತ್ವ ವನ್ನು ಮನಃಪೂರ್ವಕ ಓದಿಕೊಂಡು ಕೃತಾರ್ಥರಾಗುವದಲ್ಲದೆ ಹರಿದು ಬಿದ್ದ ಮುತ್ತುಗಳನ್ನು ಸರಮಾಡಿ ಪೋಣಿಸಿದಂತೆ ಮಹಾನಂದಿಯ ಕ್ಷೇತ್ರದ ಮಹಿ ಮೆಯನ್ನು ಸವಿಸ್ತಾರವಾಗಿ ಬರೆದಿದ್ದೇವೆ. ನಮ್ಮ ಜನ್ಮಭೂಮಿಯಾದ ಚಿಕ್ಕಮಣ್ಣೂರು ಗುರುಪೀಠದ ಚರಿತ್ರವನ್ನು ಶ್ರೀ ವೇ|| ಕವಿವರ್ಯ ಚನ್ನಕವಿ

ಗಳು ಸೂರಕೊಡ ಹಿರೇಮಠ ಇವರು ಚಿಕ್ಕಮಣ್ಣೂರು ಗುರುಪೀಠದ ವರ್ಣನೆಯ ಬಗ್ಗೆ ಪದ್ಯರೂಪದಿಂದ ಬರೆದಿದ್ದಾರೆ.

ಈ ಯಾವತ್ತೂ ಪದ್ಯಗಳಿಗೆ ಬಾಗಲಕೋಟೆ ಶ್ರೀ ಎಸ್. ಸಿ. ಶೆಟ್ಟರ ಬಿ.ಎ. (ಆನರ್ಸ) ಬಿ.ಈಡಿ. ಇವರು ಸಂಪೂರ್ಣ ಅರ್ಥ ಬರೆದು ಸಕಲರೂ ಓದಲಿಕ್ಕೆ ಮಹೋಪಕಾರ ಮಾಡಿರುವರು. ಈ ಗ್ರಂಥದಲ್ಲಿ ಪ್ರಕಟ ಮಾಡಿದೆ ಸಕಲ ಧರ್ಮದವರು ಗುರುಭಕ್ತಿ ವಹಿಸಿ ಪ್ರೇಮ ಪೂರ್ವಕವಾಗಿ ಓದಿಕೊಂಡು ಧನ್ಯರಾಗಬೇಕೆಂದು ತಿಳಿಸುವ.

-ಪೂಜ್ಯ ಚಿಕ್ಕಮಣ್ಣೂರ
ಮಹಾಸ್ವಾಮಿಗಳು.

## — ವಿಘ್ನೇಶ್ವರನ ಸ್ತೋತ್ರ —





ಗಣಪತಿಗೆ ಶರಣೂ । ಶಿವ-ಪಾರ್ವತಿಗೇ ಶರಣೂ ।
ಪಾರ್ವತಿ ಪುತ್ರನೆ । ಪಾಪ ನಿವಾರಣೆ ।
ಪರಮ ವಿರಕ್ತನಿಗೆ ॥
ವಿದ್ಯಾಧರನಿಗೇ । ವಿಘ್ನ ನಾಯಕಗೇ ।
ಮೂಷಕ ವಾಹನಗೇ । ಅಂಬಾಮಾತೆಯ ಉದರದಲಿ ಜನಿಸಿದ ।
ವಿಘ್ನೇಶಗೇ ಶರಣೂ ॥

---

### ಮಹತ್ವದಿಂದ ಕೂಡಿದ ಈ ಲೇಖನವನ್ನು ಸಂಪೂರ್ಣವಾಗಿ ಓದಿಕೊಳ್ಳಿರಿ

ಮಹನೀಯರೇ—ಬಳ್ಳಾರಿ ಜಿಲ್ಲಾ ಪೈಕಿ ಹೊಸಪೇಟ ಗ್ರಾಮದಲ್ಲಿ ಸುಪ್ರಸಿದ್ಧರಾದ ಶ್ರೀಮಾನ್ ದೊಡ್ಡಜಂಬಪ್ಪನವರು ಜ್ಯಾಲಿ ಇವರ ಧರ್ಮ ಪತ್ನಿಯವರಾದ ಶ್ರೀಮಾತಾ ಚನ್ನಮ್ಮನವರು ಈ ದಂಪತಿಗಳು ಕೇವಲ ಗುರುಭಕ್ತಿಯುತರಾಗಿ ಪೂಜಾ ನಿಷ್ಠರಿದ್ದಾರೆ. ಚನ್ನಮ್ಮನವರು ಮಧ್ಯಾಹ್ನ ಸಮಯದಲ್ಲಿ ಅಕ್ಕಿ ಹಸನ ಮಾಡಲಿಕ್ಕೆ ಮನೆಯಲ್ಲಿ ಕುಳಿತಾಗ ಒಬ್ಬ ಹೆಣ್ಣು ಮಗಳು ಬಂದು ನಾಳೆ ನಿಮ್ಮ ಮನೆಗೆ ಊಟ ಮಾಗಲಿಕ್ಕೆ ಬರುತ್ತೇನೆಂದು ಹೇಳಿದಳು. ಚನ್ನಮ್ಮನವರು ಈಕೆಯು ಯಾವ ಧರ್ಮದವಳು ಇದ್ದಾಳೋ ಎಂದು ಭಾವಿಸಿಕೊಂಡು ಅಕ್ಕಿ ಬ್ಯಾಳಿ ಕೊಡುತ್ತೇನೆ. ಊರ ಹೊರಗೆ ವೀರ ಭದ್ರೇಶ್ವರ ದೇವಸ್ಥಾನದಲ್ಲಿ ಅಡಿಗಿ ಮಾಡಿಕೊಂಡು ಭೋಜನ ಮಾಡಮ್ಮ ಅಂತ ಹೇಳಿದ ಕೂಡಲೇ ಸುಮ್ಮನೇ ಹೋಗಿ ಬಟ್ಟಳು. ಮರುದಿವಸ ಪ್ರಾತಃಕಾಲದಲ್ಲಿ ಕಾಲುವೆದಲ್ಲಿ ಸ್ನಾನ ಮಾಡಿಕೊಂಡು ಕೆಂಪು ಸೀರೆ ಉಟ್ಟು ಕೊಂಡು ತಲೆಯ ಮೇಲೆ ಎರಡು ಬೆಳ್ಳಿ ಕೊಡಪಾನಗಳು ಅವುಗಳ ಮೇಲೆ ಎರಡು ಬೆಳ್ಳಿ ಗಿಂಡಿಗಳನ್ನು ತಲೆಯ ಮೇಲೆ ಕಾಲುವೆದ ಮಡಿನೀರು ಹೊತ್ತು

ಕೊಂಡು ನೇರವಾಗಿ ಚನ್ನಮ್ಮನವರ ಮನೆಗೆ ಬಂದು ದೇವರಮನಿಗೆ ಪ್ರವೇಶ ಮಾಡಿ ಕೊಡಪಾನ ಇಳಿಸಿದಳು ಹೆಗಲ ಮೇಲೆ ಪೂಜಾದ ಸಾಮಾನ ತುಂಬಿದ ಹಸಿಬಿ ದೇವರಮನಿಯಲ್ಲಿಟ್ಟಳು. ನಾನು ಶಿವಪೂಜೆಗೆ ಕೂಡ್ರುತ್ತೇನೆ. ಘಂಟೆ ಬಾರಿಸಿದಾಗ್ಯೆ ಕದತೆಗೆಯಿರಿ. ದಂಪತಿಗಳಾದ ನೀವುಗಳು ಭೋಜನ ಮಾಡಿಕೊಳ್ಳಿರೆಂದು ಹೇಳಿ ಬಾಗಲ ಮುಚ್ಚಿಕೊಂಡು ಶಿವಪೂಜೆಗೆ ಕುಳಿತುಕೊಂಡಳು. ೧೧ ಘಂಟೆ ಸಮಯದಲ್ಲಿ ದೊಡ್ಡ ಜಂಬಣ್ಣನವರು ಮನೆಗೆ ಬಂದು ಸ್ನಾನ ಶಿವಾರ್ಚನೆ ಮಾಡಿಕೊಂಡು ಭೋಜನ ಮಾಡಿ ಹೋದರು. ಚನ್ನಮ್ಮನವರು ಭೋಜನ ಮಾಡದೆ ಗುರು ಶಿವನ ಧ್ಯಾನ ಮಾಡುತ್ತ ದೇವರಮನಿ ಹೊಸಲಿಯ ಹತ್ತರ ಕುಳಿತರು ೧೨ ಘಂಟೆ ಆದ ಕೂಡಲೇ ಘಂಟೆ ಬಾರಿಸಿದಳು. ಕದ ತೆಗೆದರು ನಿಮ್ಮ ಶಿವಭೋಜನ ಮಾಡಿಕೊಂಡರೇನು ಎಂದು ಕೇಳಿದಳು, ಮಾಡಿಕೊಂಡು ಹೊರಗೆ ಹೋದರೆಂದು ಹೇಳಿದಳು. ನೀನು ಭೋಜನ ಮಾಡಿದೆನೆಂದು ಕೇಳಿದಳು. ಚನ್ನಮ್ಮನವರು ನಿಮ್ಮನ್ನು ಬಿಟ್ಟು ನಾನು ಹೇಗೆ ಉಣ್ಣಬೇಕಮ್ಮ ಊಟ ಮಾಡಿಲ್ಲವೆಂದು ಹೇಳಿದರು. ಆಗ ದೇವರ ಮನಿಯಲ್ಲಿ ಈರ್ವರು ಭೋಜನ ಮಾಡುತ್ತ ಅನೇಕ ದೇಶದ ಸುದ್ದಿ ಹೇಳುತ್ತಲಿದ್ದಳು. ಚನ್ನಮ್ಮನವರು ನನಗೆ ಮಕ್ಕಳಾಗಿಲ್ಲಮ್ಮ ಮಕ್ಕಳ ಫಲ ಆಶೀರ್ವಾದ ಮಾಡೆಂದು ಕೇಳಿದಾಗ ಏನೂ ಉತ್ತರಕೊಡದೆ ಬೇರೆ ವಿಷಯ ಮಾತಾಡಲಿಕ್ಕೆ ಹತ್ತಿದಾಗ ಚನ್ನಮ್ಮನವರು ಮನಸ್ಸಿನಲ್ಲಿ ನನಗೆ ಮಕ್ಕಳಾಗುವ ಸಂಭವವಿಲ್ಲೆಂದು ಚಿಂತಾಜನಕರಾದರು. ಈರ್ವರು ಭೋಜನ ಪೂರೈಸಿಕೊಂಡು ಪಡಸಾಲಿಯಲ್ಲಿ ಕುಳಿತಾಗ ಒಬ್ಬ ದಾಸಯ್ಯನು ತಂಬೂರಿ ತೆಗದುಕೊಂಡು ಹಣೆಯ ಮೇಲೆ ಮೂರು ನಾಮ ಧರಿಸಿಕೊಂಡು ಕೈಯಲ್ಲಿ ಚಿಟಗಿ ಬಾರಿಸುತ್ತ ಪುರಂದರ ದಾಸರ ಪದ ಹೇಳುತ್ತ ಇವರೀರ್ವರು ಕುಳಿತಲ್ಲಿ ಬಂದು ಐದು ಸುತ್ತು ತಿರುಗುತ್ತಲಿದ್ದನು. ಚನ್ನಮ್ಮನವರು ಕೇವಲ ಭಾವಿಕರಾಗಿರೋಣದರಿಂದ ದಾಸಯ್ಯನಿಗೆ ಬಗ್ಗಿ ನಮಸ್ಕಾರ ಮಾಡಿದರು. ದಾಸಯ್ಯ ಹೋದ ಮೇಲೆ ಎರಡೂ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ನೀನು ಲಿಂಗವಿಲ್ಲದ ಭವಿಗೆ ನಮಸ್ಕಾರ ಮಾಡುವದು ವೀರಶೈವರ ಪದ್ಧತಿ ಮೀರಿ ನಿನ್ನ ಇಷ್ಟಲಿಂಗ ಕೆಳಗೆ ಹಾಕಿ ಭವಿಗೆ ನಮಸ್ಕಾರ ಮಾಡುವದು ಸಾಧು ಮಾರ್ಗವಲ್ಲ. ಮಕ್ಕಳಾಗಿಲ್ಲ

ವೆಂದು ಕೇಳುತ್ತಿದ್ದೀ ದೊಡ್ಡ ಪಾರೇದ ಹೆಣ್ಣುಮಗಳಾದ ನೀನು ಸಣ್ಣ ಪಾರೇಕ ಹೋಗಬಾರದು. ಇನ್ನು ಸ್ವಲ್ಪ ದಿವಸಗಳಲ್ಲಿಯೇ ಶ್ರೀಪೂಜ್ಯ ಪಟ್ಟದ ಮಹಾ ಸ್ವಾಮಿಗಳು ತಾವೇ ನಿಮ್ಮ ಮನೆಗೆ ಬಂದು ದಂಪತಿಗಳಾದ ನಿಮಗೆ ಶಿವದೀಕ್ಷೆ ಮಾಡಿ ಮಂತ್ರೋಪದೇಶ ಮಾಡುತ್ತಾರೆ. ಮಾಡಿದ ಬಳಿಕ ನಿನಗೆ ಎರಡು ಗಂಡು ಮಕ್ಕಳು ಹುಟ್ಟುತ್ತಾರೆ. ಹೆಣ್ಣು ಮಾತ್ರ ಆಗುವದಿಲ್ಲಾ. ಭವಿ ಗಳಿಗೆ ಮಾತ್ರ ಇನ್ನು ಮೇಲೆ ನಮಸ್ಕಾರ ಮಾಡುವದಿಲ್ಲೆಂದು ನಮಸ್ಕಾರ ಮಾಡೆಂದಳು. ಚನ್ನಮ್ಮನವರು ಆಕೆಯ ಪಾದಕ್ಕೆ ನಮಸ್ಕಾರ ಮಾಡಿದ ಕೂಡಲೇ ಎದ್ದು ನೋಡುತ್ತಾಳೆ ಯಾರೂ ಇಲ್ಲಾ ಮಾಯವಾಗಿ ಬಿಟ್ಟಳು. ದೇವರ ಮನೆಯಲ್ಲಿ ಹೋಗಿ ನೋಡಲು ಬೆಳ್ಳಿ ಕೊಡಪಾನ-ಗಿಂಡಗಳು ಪೂಜಾದ ಹಸಿಬಿ ಯಾವದೂ ಕಾಣಲಿಲ್ಲಾ. ಆಗ್ಯ ಕೈಲಾಸದಿಂದ ಪಾರ್ವ ತಾದೇವಿಯೇ ಬಂದು ಆಶೀರ್ವಾದ ಮಾಡಿದಳೆಂದು ಭಾವಿಸಿದರು. ಗುರು ಗಳು ದಯಮಾಡಿಸಿ ದೀಕ್ಷೆ ಮಾಡಿದರು. ಶ್ರೀಮಾನ್ ಕೊಟ್ರಪ್ಪನವರು, ಶ್ರೀಮಾನ್ ಮಲ್ಲಿಕಾರ್ಜುನಪ್ಪನವರು ಇಬ್ಬರು ಮಕ್ಕಳಾದರು. ಇವರೀರ್ವರ ವಿವಾಹ ಆದ ಬಳಿಕ ಮನಿತುಂಬ ಮಕ್ಕಳಾಗಿರುವರು. ಚನ್ನಮ್ಮನವರು-ಜಂಬಣ್ಣನವರು ಧರ್ಮವಂತರಾಗಿ ಮನೆಗೆ ಬಂದ ಹರಗುರು ಮಹಾಸ್ವಾಮಿ ಗಳವರ ಪೂಜ್ಯರಪಾದ ತೀರ್ಥ ತೆಗೆದುಕೊಂಡು ಭೋಜನ ಮಾಡಿಸಿ ಕಾಣಿಕೆ ಕೊಟ್ಟು ಆಶೀರ್ವಾದಕ್ಕೆ ಪಾತ್ರರಾಗುತ್ತಾರೆ. ಇವರ ಭಕ್ತಿಗೆ ವೆ ಚ್ಚಿ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ತಪೋನಿಧಿ ರಂಭಾಪುರಿ ಸಾರ್ವಭೌಮರು ಇವರ ಮನೆಗೆ ದಯ ಮಾಡಿದ ಆಶೀರ್ವಾದ ಫಲದಿಂದಲೇ ಇವರಿಗೆ ಸುಖ ಸಂಪತ್ತಿಗೆ ಕಡಿಮೆ ಇಲ್ಲಾ. ಈ ಸಮಾಚಾರ ಸುಳ್ಳೆಂದು ಭಾವಿಸಬಾರದು. ಚನ್ನಮ್ಮನವರು-ಜಂಬಣ್ಣನವರು ಈಗಲೂ ಇದ್ದಾರೆ ಪತ್ರಕ್ಷ ಇವರ ಮುಖ ದಿಂದ ಕೇಳಿ ಧನ್ಯರಾಗಬೇಕು.

—( ಅಸ್ತು )—



ಶ್ರೀ ೧೦೦೮ ಜಗದ್ಗುರು ಪ್ರಸನ್ ರೇಣುಕ ವೀರಗಂಗಾಧರ ರಾಜೇಂದ್ರ
ಶಿವಾಚಾರ್ಯ ಮಹಾಸ್ವಾಮಿಗಳು ರಂಭಾಪುರಿ ಸಿಂಹಾಸನ

ಈ ಗ್ರಂಥ ಕುಸುಮಕ್ಕೆ ಜಗದ್ಗುರುಗಳವರು
ಆಶೀರ್ವಾದಿಸಬೇಕು.

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥



# ಶ್ರೀ ಜಗದ್ಗುರು ರೇಣುಕಾಚಾರ್ಯ

## ಸು ಪ್ರ ಭಾ ತ

ಏಳು ಜಗದಾಚಾರ್ಯ ಏಳು ರೇಣುಕಾಚಾರ್ಯ ।
ಏಳು ಸದ್ಗುರುನಾಥ ಏಳಯ್ಯ ಬೆಳಗಾಯಿತು ॥ಪಲ್ಲ॥

ಅಗಸ್ತ್ಯಮುನಿ ಸತಿ ಲೋಪಾಮುದ್ರೆಸಹ ।
ದಧೀಚಿ ವಿಶ್ವಾಮಿತ್ರ ಜಮದಗ್ನಿಮೇಣ್ ॥
ಕಶ್ಯಪ ವಶಿಷ್ಠ ಕಣ್ವಾದಿ ಹರಕಂಠ ।
ಉಪಮನ್ಯು ಮುನಿಗಳೈದಿಹರು ನೀನೇಳಯ್ಯ ॥೧॥

ರಂಭಾಪುರೀ ಜಗದ್ಗುರು ಪೀಠದೊಡೆಯನೀ ।
ಸುರಲೋಕದಾ ಗಣಾಧಿಪತಿ ನಿನ್ನಾಲಯಕೆ ॥
ಜಗದ್ಗುರು ರುದ್ರಮುನೀಶ್ವರ ವೀರಭದ್ರ ।
ಗೋತ್ರಪುರುಷರೈಬಂದಿಹರು ನೀನೇಳಯ್ಯ ॥೨॥

ಲಂಕಾಧಿಪತಿ ವಿಭೀಷಣ ಚೋಳ ಭೂಪಾಲ ।
ನೀಲಗಲ ಚಕ್ರವರ್ತಿ ಇಂದ್ರಾದಿ ಅಮರರು ॥
ನಿನ್ನ ದರ್ಶನಕೆಂದು ಬಾಗಿಲಲಿ ನಿಂತಿಹರು ।
ಸನ್ನುತನೆ ಗುರುವರ್ಯ ನೀನೇಳಯ್ಯಾ ॥೩॥

– ತ್ರಿಲೋಕ ಸಂಚಾರಿ ನಾರದ ಧರ್ಮಮೂರ್ತಿ ನಂದೀಶ್ವರ ।
ಭೃಂಗಿರಿಟಿ ಗಂಧರ್ವಾದಿಗಳು ನಾಟ್ಯಂಗೈದಿಹರು ॥
ಗೋರಕ್ಷನಾಥ ಅಸಮಭೂಪಾಲ ವೀರಬಿಜ್ಜಳ ॥
ವಿಕ್ರಮಾರ್ಕ ಮಹಾರಾಜರಾಗಮಿಸಿಹರು ನೀನೇಳಯ್ಯಾ ॥೪॥

ಅದ್ವೈತದಾ ಗುರು ಶಂಕರಾಚಾರ್ಯರು ।
ನಿನ್ನ ಕೃಪೆಯಿಂ ಚಂದ್ರಮೌಳೀಶ್ವರ ಲಿಂಗವನು ॥
ಮೇಣ್‌ರಜತ ಗಣಪತಿಯನು ಪಡೆದುದಕೆ ।
ಸನ್ನುತಿಯ ಗೈಯ್ಯಲು ಬಂದಿಹರು ನೀನೇಳಯ್ಯಾ ॥೫॥

ಕೈಲಾಸದ ಅಮರ ಗಣಂಗಳು ನಿನ್ನ ।
ದರ್ಶನವ ನೀಕ್ಷಿಸುತ ನಿಂತಿಹರು ॥
ಪಾವನಚರಿತ ಜಂಗಮ ಕುಲಸಾರ್ವಭೌಮ ।
ದೇವಸಂದಣಿಯ ತುಷ್ಟಿಪಡಿಸಲು ನೀನೇಳಯ್ಯಾ ॥೬॥

ಪಾರ್ವತಿ ವರಮಹಾಲಕ್ಷ್ಮಿ ಸರಸ್ವತಿ ।
ಮಾಯಾದೇವಿ ರೇಣುಕಾಂಬೆ ಜಗಜ್ಜನನಿಯರು ॥
ನಿನ್ನ ಆಶೀರ್ವಾದವಂ ಪಡೆಯಲು ।
ಸೋಮೇಶ್ವರ ಕ್ಷೇತ್ರಕ್ಕಾಗಮಿಸಿಹರು ನೀನೇಳಯ್ಯಾ ॥೭॥

ಗದಗ ಪಟ್ಟಣದಿ ಲಿಂಗಮೂರ್ತಿಯಾಗಿ ನೆಲಸಿರ್ಪ ।
ವರಸಿದ್ಧಿ ರೇಣುಕನೆ ತವನಾಮ ಪಠಿಸಲ್ಕೆ ॥
ಗದಗ–ಬೆಟಗೇರಿ ನಾಗರೀಕರೈದಿಹರು ।
ಸದುಮಲನೆ ಕೃಪೆದೋರಿ ನೀನೇಳಯ್ಯಾ ॥೮॥

ಚಿಕ್ಕಮಣ್ಣೂರ ರೇವಣಸಿದ್ಧ ಶಿವಾಚಾರ್ಯರು ।
ಅಕ್ಕರದಿ ನುಡಿದ ಸುಪ್ರಭಾತವಿದನು ॥
ಪಠಿ ಪಠಿಯ ತೆರದಿಂದ ಪಠಿಪರ್ಗೆ ।
ಸದ್ಗುರುವಿನ ಕರುಣೆಯಿಂ ಸಿದ್ಧಿದೊರಕೊಂಬುದಿದು ಸತ್ಯವು ॥೯॥

ಶ್ರೀ ರೇವಣಸಿದ್ಧ ರಾಜೇಂದ್ರ ಶಿವಾಚಾರ್ಯ
ಮಹಾಸ್ವಾಮಿಗಳ ಕೃತ ಚಿಕ್ಕಮಣ್ಣೂರ.

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥



## ತಂದೆ ಮಕ್ಕಳ ಸಂವಾದ

(ದಾಟ : ಸಖನೆನೋಡು ನೋಡು ಶೈಲವೆಂತು ಮೆರೆವುದು ಎಂಬಂತೆ)

ಮಗ— ಜನಕ ನಮ್ಮ ಧರ್ಮವಾವುದೆಂದು ತಿಳಿಯಲು ।
ಅನುನಯದೊಳು ಕೇಳುತಿರುವೆ ಪೇಳುನೀನದಂ ॥೧॥
ತಂದೆ— ತನಯ ನಾವು ವೀರಶೈವರೆಮಗೆ ಗುರುಗಳು ।
ವಿನುತರೇಣುಕಾದಿ ಪಂಚಪ್ರಮಥವರ್ಯರು ॥೨॥
ಮಗ— ನಮ್ಮ ಮತಕೆ ಗೋತ್ರಪತಿಗಳಾರು ತಂದೆಯೇ ।
ಗಮ್ಮನೀಗ ನನಗೆ ತಿಳಿಯುವಂತೆ ಪೇಳು ನೀ ॥೩॥
ತಂದೆ— ವೀರಶೈವ ಮತಕೆ ತನಯಗೋತ್ರ ಪತಿಗಳು ।
ವೀರ ನಂದಿ, ಭೃಂಗಿ, ವೃಷಭ, ಸ್ಕಂದ ಪ್ರಮಥರು ॥೪॥
ಮಗ— ಪೆಸರುವಡೆದು ನಮ್ಮ ಗುರುಗಳೆಂದು ಬಂದರು ।
ಬೆಸಸು ಅವರು ಮತವನೆಂದು ಸ್ಥಾಪಿಸಿರವರು ॥೫॥
ತಂದೆ— ಜಗವುಪುಟ್ಟುವಾಗ ಹರನೊಳುದಿಸಿ ಬಂದರು ।
ಮಗನೆ ಅಂದು ನಮ್ಮ ಮತವ ಸ್ಥಾಪಿಸಿರುವರು ॥೬॥
ಮಗ— ನಿತ್ಯ ಸುಖವು ದೊರೆಯುವುದಕೆ ನಾವು ಯಾರನು ।
ನಿತ್ಯದಲ್ಲಿ ಭಜಿಸಬೇಕು ಪೇಳು ತಂದೆಯೆ ॥೭॥

ತಂದೆ— ತನಯ ರೇಣುಕಾದಿ ಪಂಚ ಗುರುಗಳನ್ನು ನೀ ।
ನೆನೆಸಿರಂತರಂಗದೊಳಗೆ ಸುಖವ ನೀವರು ॥೮॥

ಮಗ— ಇವರನೇಕೆ ಭಜಿಸಬೇಕು ಪೇಳು ಜನಕನೇ ।
ಶಿವನ ನಾಮ ನೆನೆಯುತಿರಲು ಸಿಗದೆ ಮೋಕ್ಷವು ॥೯॥

ತಂದೆ— ಹರನಿಗಿಂತ ಗುರುವು ಅಧಿಕವೆಂಬ ಮತವಿದು ।
ಭರದೆತನಯ ನಗುರೊರಧಿಕವೆಂದು ಪೊಗಳ್ವುದು ॥೧೦॥

ಮಗ— ಅರಿತುಕೊಂಡೆ ನಿನ್ನ ಬೋಧದಿಂದ ತಾತನೇ ।
ಗುರುಗಳನ್ನು ಭಜಿಸಿ ನಾನು ಧನ್ಯನಾಗ್ವೆನು ॥೧೧॥
ಪಂಚ ಪೀಠಗಳಿಗೆ ಶಿಷ್ಯ ಸಿದ್ಧರಾಮನು ।
ಪಂಚಸ್ವಾಮಿಗಳಿಗೆ ನಿತ್ಯ ನಮಸ್ತ್ರೆಗೈವನು ॥೧೨॥

ವೇ. ಕೈ. ಶ್ರೀ ಸಿದ್ಧರಾಮಯ್ಯಸ್ವಾಮಿ ಕೃತ
ಗಂಗಾಧರಮಠ, ಮುದುಗಲ್ಲ.

॥ ನಮಃ ಪಂಚಜಗದ್ಗುರುಭ್ಯಃ ॥

ಓಂ



ಶ್ರೀ ಸನಾತನ ಧರ್ಮಬೋಧಕರಾದ ಶ್ರೀ ಮ। ಷ। ಬ್ರಹ್ಮ।
ಪಂಡಿತ ಶ್ರೀ ರೇವಣಸಿದ್ಧ ಶಿವಾಚಾರ್ಯ ಮಹಾಸ್ವಾಮಿಗಳು
ಗುರುಸ್ಥಾನ್ ಬೃಹನ್ಮಠ ಚಿಕ್ಕಮಣ್ಣೂರ.

॥ ಶ್ರೀ ನಮಃ ಪಂಚಜಗದ್ಗುರುಭ್ಯಃ ॥

# ಶ್ರೀಶೈಲ ಹಾಗೂ ಮಹಾನಂದಿ ಕ್ಷೇತ್ರಗಳ ಮಹತ್ವ

## ಮಂಗಲಶ್ಲೋಕ

ಪಂಚಾಸ್ಯವವನೋದ್ಭೂತಾನ್ । ಪಂಚತತ್ವಾವಧಿ ನಾಯಕಾನ್ ।
ಪಂಚಬ್ರಹ್ಮ ಮಯಾನೌಮಿ । ಪಂಚಾಚಾರ್ಯಾನ್ ಜಗದ್ಗುರೂನ್ ॥

ವೀರ ಪೀಠೇವಿರಾಜಂತಂ । ವೀರವೃತ್ತಿ ಪ್ರದಾಯಕಂ ।
ವಂದೇ ಸದ್ಭಕ್ತ ಮಂದಾರಂ । ಶಿವಾನದಂ ಜಗದ್ಗುರುಂ ॥

ರಂಭಾಪುರೀ ವೀರಸಿಂಹ ಪೀಠನಾಥೋ ಜಗದ್ಗುರುಃ ।
ಪ್ರಸನ್ ರೇಣುಕೋಜೀಯಾ । ದ್ವೀರ ಗಂಗಾಧರಃ ಸದಾ ॥

ಯಸ್ಯಸ್ಮರಣ ಮಾತ್ರೇಣ । ನೃಣಾಂ ಮುಕ್ತಿಃ ಕರಿಸ್ಥಿತಾಃ ।
ತಂವಂದೇ ಜಗವಾಧಾರಂ । ರೇಣುಕಾರ್ಯಂ ಜಗದ್ಗುರುಂ ॥

ಮೂಕಂ ಕರೋತಿ ವಾಚಾಲಂ । ಪುಂಗಮ್ ಲಿಂಘಯತೇನಿರಿಂ ।
ಯತ್ಕೃ ಪಾತ್ ಮಹಂವಂದೇ । ರೇಣುಕಾರ್ಯಂ ।
ಜಗದ್ಗುರುಮ್ ॥

ಮೂಕಂಕರೋತಿವಾಚಾಲಂ । ಪುಂಗಮ್ ಲಂಘಯತೇಗಿರಿಂ ।
ಯತ್ಕೃಪಾತ್ ಮಹಂವಂದೇ ! ಪಂಡಿತಾರ್ಯಂ ।
ಜಗದ್ಗುರುಮ್ ॥

ಯಾತ್ರೆಯ ಮಾಡಿರಣ್ಣ ।
ಶ್ರೀಶೈಲಸ್ವಾಮಿಕ್ಷೇತ್ರ ನೋಡಿದವರ ।
ನೇತ್ರ ಸಾಫಲ್ಯವಣ್ಣ ।
ಮುಕ್ತಿನಾಥ ಮಲ್ಲಿನಾಥನೇ ಮುಕ್ಕಣ್ಣ ।
ಪಾತಾಳ ಗಂಗಾಸ್ನಾನ ಪಾಪ ಪರಿಹಾರವಣ್ಣ ।
ಮುಕ್ತಿಗೊಡೆಯ ಮಲ್ಲಿನಾಥನೇ ಮುಕ್ಕಣ್ಣ ॥

# ಶ್ರೀಶೈಲ ಕ್ಷೇತ್ರದ ಮಹತ್ವ

ಕರ್ನೂಲ, ಜಿಲ್ಹಾ ಪೈಕಿ ಪುಣ್ಯಭೂಮಿಯಾದ ಭರತಖಂಡದಲ್ಲಿ ಪರಿಶೋಭಿಸುತ್ತಿರುವ ಅನೇಕ ಕ್ಷೇತ್ರಗಳ ಪೈಕಿ ಶ್ರೀಶೈಲ ಮಹಾ ಕ್ಷೇತ್ರವು ಅತ್ಯಂತ ಪ್ರಸಿದ್ಧವಾದ ಪುರಾತನ ಅಂದರೆ ಯುಗಯುಗಾಂತರಗಳಲ್ಲಿ ಹುಟ್ಟಿದ ಕ್ಷೇತ್ರವಿರುತ್ತೆ. ಈ ಪುಣ್ಯಸ್ಥಳದಲ್ಲಿ ಮಹಾತಪಸ್ವಿಯಾದ ಶಿಲಾದ ಮಹಾಋುಷಿಯು ತಪಸ್ಸು ಮಾಡಿದ ಕಾರಣ ಇದಕ್ಕೆ ಶ್ರೀಶೈಲ ಕ್ಷೇತ್ರ ಎಂದು ಹೆಸರು ಪ್ರಾಪ್ತವಾಯಿತು. ಹಾಗೂ ಶಿಲಾದ ಮುನಿಯ ಪುತ್ರನಾದ ಪರ್ವತನೆಂಬ ಕುಮಾರನ ಭಕ್ತಿಗೆ ಮೆಚ್ಚಿ, ಶಿವನು ಲಿಂಗರೂಪದಿಂದ ಈ ಪರ್ವತದಲ್ಲಿ ವಿರಾಜಿತನಾದನು. ಹಿಂದಕ್ಕೆ ಗುಪ್ತವಂಶದ ರಾಜಪುತ್ರಿಯಾದ ಚಂದ್ರಾವತಿ ಎಂಬವಳು ಈ ದೇವರನ್ನು ಮಲ್ಲಿಗೆ ಹಾಗೂ ನೆಟ್ಟದವರೇ ಹೂಗಳಿಂದ ಪೂಜೆಯನ್ನು ಮಾಡಿದ ಕಾರಣ ಮಲ್ಲಿಕಾರ್ಜುನ ಎಂಬ ಹೆಸರು ಬಂದಿದೆ. ಶಿವನು ನಂದೀಶ್ವರನ ತಪಸ್ಸಿಗೆ ಮೆಚ್ಚಿ, ಧರ್ಮಪತ್ನಿಯಾದ ಭ್ರಮರಾಂಬಾ ರೂಪಧರಿಸಿ ಅವನಿಗೆ ಪ್ರತ್ಯಕ್ಷನಾದನೆಂದು ತಿಳಿದುಬರುತ್ತೆ. ಜಗತ್ತಿನ ೧೨ ಜ್ಯೋತಿರ್ಲಿಂಗಗಳಲ್ಲಿ ಶ್ರೀಶೈಲ ಪರ್ವತದಲ್ಲಿಯ ಲಿಂಗವು ಜ್ಯೋತಿರ್ಲಿಂಗವಾಗಿರುವದರಿಂದ ಸರ್ವಮತೀಯರು ನಡೆದುಕೊಳ್ಳುತ್ತಾರೆ. ಮಹಾ ಶಿವರಾತ್ರಿ ಹಾಗೂ ಯುಗಾದಿಯಲ್ಲಿ ಒಹು ದೂರ ದೇಶದಿಂದ ಯಾತ್ರಾ ನಿವಿಃತ್ಯವಾಗಿ ಸಹಸ್ರಾವಧಿ ಜನರು ಹೋಗಿ ಶ್ರೀಶೈಲ ಮಲ್ಲಿಕಾರ್ಜುನ ಹಾಗೂ ನವಶಕ್ತಿಗಳಲ್ಲಿ ಒಂದಾದ ಶ್ರೀ ಭ್ರಮರಾಂಬಾದೇವಿಯ ದರ್ಶನ ಮಾಡಿಕೊಂಡು ಕೃತಾರ್ಥರಾಗುವರು. ಶ್ರೀಶೈಲ ಶಿಖರಂ ದೃಷ್ಟ್ವಾ ಪುನರ್ಜನ್ಮ ನ ವಿದ್ಯತೆ" ಎಂಬಂತೆ ಶ್ರೀಶೈಲಶಿಖರವನ್ನು ನೋಡಿದರೆ ಪುನಃ ಮಾನವರು ಹೀನ ಸಂಸಾರದಲ್ಲಿ ಹುಟ್ಟುವಂತೆಯೇ ಇಲ್ಲ. ಮುಕ್ತಿಯಾಗುತ್ತದೆಂದು ಬಲವಾದ ಪ್ರಮಾಣವಿದೆ. ಆದಕಾರಣ ಮಹಾರಾಷ್ಟ್ರ, ಆಂಧ್ರಪ್ರದೇಶ ಕರ್ನಾಟಕ ಮೊದಲಾದ ಕಡೆಯಿಂದ ಅನೇಕ ಧರ್ಮದವರು ನಡೆದುಕೊಳ್ಳುವರಲ್ಲದೆ ಮಲ್ಲಿಕಾರ್ಜುನ ಮೂರ್ತಿಯನ್ನು ಮನೆ ದೇವರೆಂದು ಮಾಡಿಕೊಂಡಿರುವರು. "ಲಿಂಗಾ ದರ್ಶನಂ ಪುಣ್ಯಂ" ಎಂಬ ಪ್ರಮಾಣವನ್ನೇ ಪ್ರಾಧಾನ್ಯವಾಗಿ ತಿಳಿದುಕೊಂಡು, ಯಾತ್ರಿಕರು ಶಿವರಾತ್ರಿ ದಿನವೇ ಪ್ರಾಂತಃಕಾಲದಲ್ಲಿ

ಪಾತಾಳ ಗಂಗಾ ದರ್ಶನ ಮಾಡಿಕೊಂಡು ತಮ್ಮ ಮಾತಾ-ಪಿತೃಗಳ ಕುಲೋತ್ಪನ್ನರ ಹೆಸರಿಲೆ ಸಂಕಲ್ಪವನ್ನು ಹೇಳಿಸಿ ಸ್ನಾನ-ಕ್ರೀಯಾದಿಗಳನ್ನು ಮಾಡುವರಲ್ಲದೆ ಒಂದು ಮುತ್ತಿಲಿಯಲ್ಲಿ ಕುಬುಸದ ಖಣ, ಹಣಿಗಿ, ಕುಂಕುಮ, ಬಂಡಾರ, ಬಳೆಗಳನ್ನು ಸಹಿತ ಇಟ್ಟು ಪೂಜೆಯನ್ನು ಮಾಡಿ ನೈವೇದ್ಯ ಹಿಡಿದ ಬಳಿಕ ನಮಸ್ಕರಿಸಿ, ಪಾತಾಳ ಗಂಗಾದಲ್ಲಿ ಬಿಡುತ್ತಾರೆ. ಈ ಪದ್ಧತಿ ಈಗ್ಯೂ ಇರುವದು. ಶ್ರೀಶೈಲ ಮಲ್ಲಿಕಾರ್ಜುನ ಮಹಾದ್ವಾರದ ಗೋಪುರದಿಂದ ನಾಲ್ಕು ಮೈಲು ದೂರದಲ್ಲಿ ಪಾತಾಳ ಗಂಗಾ ಆದೆ. ಅಲ್ಲಿಯ ವರೆಗೆ ಅಂಗಹೀನರು, ಕುರುಡರು, ಭಜನಾ ಮಾಡತಕ್ಕವರು ಸಹಸ್ರಾವಧಿ ಭಿಕ್ಷೆ ಕರಿರುತ್ತಾರೆ. ಅವರಿಗೆ ಅಕ್ಕಿ, ಮಂಡಳ, ರೊಕ್ಕ ಹಾಕುತ್ತಾ ಶ್ರೀಶೈಲ ಮಹಾರಾಜಕೀ ಜೈ ! ಎಂದು ಕ್ಷಣಕ್ಷಣಕ್ಕ್ಯೂ ಜಯಘೋಷ ಮಾಡುತ್ತ ತಮ್ಮಲ್ಲಿರುವ ಆಸ್ತಿಕ್ಯ ಭಕ್ತಿಯನ್ನು ವ್ಯಕ್ತಗೊಳಿಸುವರು. ಶಿಖರೇಶ್ವರ, ಹಾವಕೇಶ್ವರ, ಅಟಕೇಶ್ವರ, ಸಹಸ್ರಲಿಂಗ, ವೀರಭದ್ರಸ್ವಾಮಿ, ಮಲ್ಲಿಕಾಗುಂಡ, ವಸಂತಮಂಟಪ, ಪಾಂಡವ ದೇವಾಲಯಗಳು, ಅನ್ನಪೂರ್ಣಾ ದೇವಾಲಯ, ಕುಮಾರಸ್ವಾಮಿ, ರಾಜರಾಜೇಶ್ವರಿ, ಪಂಚನಂದೀಶ್ವರ, ಚಂದ್ರಗುಂಡ ಮೊದಲಾದ ದಿವ್ಯ ಸ್ಥಳಗಳು ಯಾತ್ರಿಕರಿಗೆ ದರ್ಶನೀಯಗಳಾಗಿರುತ್ತವೆ. ಇದಲ್ಲದೆ ಶ್ರೀ ನಾಗಲೂಟಿಯ ವೀರಭದ್ರೇಶ್ವರ ಓಂಕಾರದಲ್ಲಿ ಅಶ್ವತ್ಥ ಅಂದರೆ ಅರಳಿ ವೃಕ್ಷವನ್ನು ಪ್ರಥಮದಲ್ಲಿ ದರ್ಶನ ಮಾಡಿಕೊಂಡು ಪುನಃ ಸಿದ್ಧೇಶ್ವರ ಅನ್ನಪೂರ್ಣ ದರ್ಶನ ಮಾಡಿಕೊಂಡು ಮಹನಂದಿ ಹಾಗೂ ಪ್ರಥಮನಂದಿ ದರ್ಶನ ಮಾಡಿಕೊಂಡು ಮಹನಂದಿಯ ಹೊಂಡದಲ್ಲಿ ಸ್ನಾನ ಮಾಡಲಿಕ್ಕೆ ಬಹು ಅನುಕೂಲವಾಗಿರುತ್ತೆ. ಹಿಂದಕ್ಕೆ ಪರಮಾವತಾರಿಗಳೂ ವೀರಶೈವ ಮತಸ್ಥಾಪನಾಚಾರ್ಯರಾದ ಶ್ರೀ ಜಗದ್ಗುರು ಪಂಡಿತಾರಾಧ್ಯ ಶಿವಾಚಾರ್ಯರು ಶ್ರೀ ಮಲ್ಲಿಕಾರ್ಜುನ ಲಿಂಗದಲ್ಲಿ ಪ್ರಾದುರ್ಭವಿಸಿ ಶ್ರೀ ಗಿರಿರಾಜು ಸೂರ್ಯಸಿಂಹಾಸನವನ್ನು ಸೂರ್ಯನಂತೆ ಬೆಳಗಿ ಪರ್ವತಗಳಲ್ಲಿ ಸಂಚರಿಸಿದ ಪುಣ್ಯಭೂಮಿಯಲ್ಲವೇ ? ಶ್ರೀ ಜಗದ್ಗುರು ರೇಣುಕಾಚಾರ್ಯರು ಕಾಂಚೀನಗರ ಏಕಾಮ್ರನಾಥ ಭೂಮಿಯಲ್ಲಿ ಹಸ್ತವನ್ನಿಡಲು ಭೂಗರ್ಭದಿಂದ ಶ್ರೀ ರುದ್ರಮುನಿ ಶಿವಾಚಾರ್ಯರು ಹುಟ್ಟಿದ ಬಳಿಕ ಇವರನ್ನು ಶ್ರೀಶೈಲಕ್ಷೇತ್ರಕ್ಕೆ ಜಗದ್ಗುರು ರೇಣುಕಾಚಾರ್ಯರು

ಅನೇಕ ವೃಕ್ಷಗಳನ್ನು ಸರೋವರ ಹಾಗೂ ಗವಿಗಳನ್ನು ತೋರಿಸುತ್ತ ಮಲ್ಲಿಕಾರ್ಜುನ ಪಾತಾಳ ಗಂಗಾ ಮೊದಲಾದ ಮುಖ್ಯ ಮುಖ್ಯ ಪುಣ್ಯಕ್ಷೇತ್ರಗಳನ್ನು ತೋರಿಸಿದ **ಭೂಕೈಲಾಸ ಕ್ಷೇತ್ರ ಇದೇ ಅಲ್ಲವೇ?** ಮಹನ್ ಋಷಿಪುಂಗದವರು ಅನುಷ್ಠಾನವನ್ನು ಮಾಡಿ ತಮ್ಮ ಸಂಕಲ್ಪವನ್ನು ಪೂರೈಸಿಕೊಂಡರಲ್ಲದೆ **ಸಾನಂದ ಮಹಾಋುಷಿಯು** ಈ ಸಿಂಹಾಸನಕ್ಕೆ ಶಿಷ್ಯನಾಗಿ ಕೃತಾರ್ಥನಾದನು. ಹಾಗೂ **ಸೊಲ್ಲಾಪೂರ** ಸಿದ್ಧರಾಮೇಶ್ವರನು ಇದೇ ಶ್ರೀಶೈಲಕ್ಷೇತ್ರದಲ್ಲಿ ಆಗಮಿಸಿ ಮಲ್ಲಿಕಾರ್ಜುನ ದರ್ಶನವಾಗಿ ಪ್ರತ್ಯಕ್ಷ ಫಲವನ್ನು ಪಡೆದುಕೊಳ್ಳಬೇಕೆಂದು ಗುಡ್ಡದ ಶಿಖರದ ಮೇಲಿಂದ ಪಾತಾಳ ಗಂಗಾದಲ್ಲಿ ಹಾರಲು ಭಕ್ತವತ್ಸಲನಾದ ಮಲ್ಲಿಕಾರ್ಜುನನೇ ಪ್ರತ್ಯಕ್ಷನಾಗಿ ಫಲವನ್ನು ಕೊಟ್ಟ ವಿಷಯ ಸಿದ್ಧರಾಮೇಶ್ವರ ಪುರಾಣದಿಂದ ತಿಳಿದುಬರುತ್ತೆ. ಪಾಂಡವ ಚಕ್ರವರ್ತಿಗಳು ತಾವು ರಾಜರಾದಾಗ್ಯೂ ಧರ್ಮನಿಷ್ಠರಾಗಿ ಮಹ ಶ್ರೀಶೈಲಕ್ಷೇತ್ರ ದರ್ಶನ ಮಾಡಿಕೊಂಡು ಗುಡ್ಡ-ಗಂವಾರಗಳಲ್ಲಿ ಸಂಚರಿಸಿದ ಕಾರಣ ಇವರ ದೇವಸ್ಥಾನಗಳು ಶ್ರೀಶೈಲ ಪವಿತ್ರ ಸ್ಥಳದಲ್ಲಿ ಅವೆ- ಹೇಮರಡ್ಡಿ ವಂಶದಲ್ಲಿ ಶರಣೆಯಾದ ಕುಂ. ಸೌ. **ಮಲ್ಲಾಂಬೆಯು** ಶ್ರೀ ಮಲ್ಲಿಕಾರ್ಜುನ ಸೇವೆಯನ್ನು ಮಾಡಿ ಹೆಚ್ಚಿನ ಪದವಿಯನ್ನು ಪಡೆದುಕೊಂಡು ಮೋಕ್ಷಗಾಮಿ ಆದಳು. ಈಗ್ಯೂ ಮಹಾ ಶರಣೆಯ ಪುರಾಣ, ನಾಟಕ, ಕೀರ್ತನ ನಡೆಯಬೇಕಾದರೆ ಶ್ರೀ ಶೈಲದಲ್ಲಿಯ ಗುರುವಿಗೆ ಕೇವಲ ಭಕ್ತಿಯಿಂದ ನಡೆದುಕೊಂಡಲ್ಲಿ ಹೆಸರುವಾಸಿಯಾದಳೆಂದು ಬರೆದರೆ ಅತಿಶಯೋಕ್ತಿ ಆಗಲಾರದು. **ರತ್ನಮಣಿ ಹೇಮಾದಿಗಳು** ಮಾರಿದ ಸ್ಥಳದಲ್ಲಿ ಹುಲ್ಲು ಮಾರೀತೇ ? ಶ್ರೀಶೈಲ ಕ್ಷೇತ್ರಕ್ಕೆ ಹೋಗಿ ದರ್ಶನ ಮಾಡಿಕೊಂಡು ಗಂಗಾ ಸ್ನಾನ ಕ್ರೀಯಾದಿಗಳನ್ನು ಮಾಡಿದರೆ ಎಂಥಾ ಪಾಪಾತ್ಮರಿದ್ದಾಗ್ಯೂ ಪವಿತ್ರರಾಗುತ್ತಾರೆ. ಆದಕ್ಕಾಗಿನೇ ಆರ್ಯರು ಯಾತ್ರಾಕ್ಷೇತ್ರಗಳ ದರ್ಶನ ಯಾಕೆ ಇಟ್ಟಿದ್ದಾರೆ ? ಪವಿತ್ರ ಕ್ಷೇತ್ರಗಳ ದರ್ಶನದಿಂದ ಮನಸ್ಸು ಶುದ್ಧವಾಗುತ್ತೆ. ಹಗಲಿರುಳು ಮನುಷ್ಯರು ಸಂಸಾರದಲ್ಲಿ ತೊಡಗಿ ಬೆಂಡಾಗಿರುತ್ತಾರೆ. ಕ್ಷೇತ್ರ ಯಾತ್ರೆ ಮಾಡುವದರಿಂದ ಸ್ತ್ರೀ-ಪುರುಷರಿಗೆ ಒಂದು ತರಹ ಆನಂದಕ್ಕೆ ಕಾರಣವಾಗುವದು. ಹಾಗೂ ಆಪ್ತಬಂಧುಗಳ ಸ್ನೇಹಿತರ ಭೆಟ್ಟಿಯಾಗಿ ಕ್ಷೇಮ ಸಮಾಚಾರಗಳು ತಿಳಿಯುತ್ತವೆ. **“ದೇಶಾಟನಂ ಪಂಡಿತ ಮಿತ್ರತಾಚ”**

ದೇಶಪರ್ಯಟನ ಮಾಡೋಣದರಿಂದ ಪಂಡಿತರ ಹಾಗೂ ಇತರ ಜನಗಳ ಪರಿಚಯವಾಗುವದೆಂದು ನೀತಿಕಾರರು ಹೇಳುವರು. ಹಿಂದಕ್ಕೆ ಶ್ರೀಶೈಲಕ್ಕೆ ಹೋಗುವ ಯಾತ್ರಿಕರಿಗೆ ಮಾರ್ಗ ಚನ್ನಾಗಿರದೆ ಸಂಚರ ಕಾಟದಿಂದಲೂ ಮೋಟರ, ಚಕ್ಕಡಿಗಳು ಇಲ್ಲದಿರುವ ಕಾರಣ ಬಹು ತೊಂದರೆಯಾಗಿತ್ತು. ದಯಾಳುಗಳಾದ ಗೌರ್ಮೆಂಟಿನವರು ಸುವ್ಯವಸ್ಥೆಯನ್ನಿಟ್ಟದ್ದಾರೆ. ಹೋಗ ತಕ್ಕ ಯಾತ್ರಿಕರಿಗೆ ರೇಲ್ವೆ ಕಂಪನಿಯವರು ಮುಂಚಿತವಾಗಿಯೇ ರಿಟರ್ನ್ ತಿಕೀಟು ಇಟ್ಟಿರುತ್ತಾರೆ. ನಂದ್ಯಾಲ ಸ್ಟೇಶನದಲ್ಲಿ ಇಳಿದು ಅಲ್ಲಿ ಶ್ರೀ ಪ್ರಥಮನಂದಿ ಕ್ಷೇತ್ರವು ನಂದ್ಯಾಲ ರೇಲ್ವೆ ಸ್ಟೇಶನ್ನಿಗೂ ಊರಿನ ನಡುವೆ ಚಾಮಕಾಲುವೆ ಕುಮಧ್ವತೀ ನದಿಗಳ ಮಧ್ಯದಲ್ಲಿ ರಮಣೀಯವಾಗಿರುತ್ತೆ. ಈ ದೇವಸ್ಥಾನಕ್ಕೆ ಸ್ಟೇಶನ್ನದಿಂದ ನಾಲ್ಕು ಫರ್ಲಾಂಗವಾಗುವದು. ಮಾರ್ಗದ ಸಮೀಪಕ್ಕೆ ಇರುವದು ಯಾತ್ರಿಕರು ಸ್ನಾನ, ಶಿವಾರ್ಚನ ಭೋಜನ ಗಳನ್ನು ತೀರಿಸಿಕೊಂಡು ಪ್ರಥಮ ನಂದೀಶ್ವರನ ದರ್ಶನವಂ ಗೈದು ಆತ್ಮಕೂರಿಗೆ ಮೋಟರಗಳ ಮೇಲೆ ಎತ್ತಿನ ಬಂಡೆಗಳ ಮೇಲೆ ಹೋಗಲು ರಾಜಮಾರ್ಗವಿದ್ದು ನಂದ್ಯಾಲದಿಂದ ಆತ್ಮಕೂರು ೩೦ ಮೈಲು ಆಗುವದು. ಆತ್ಮಕೂರಿಂದ ನಾಗಲೂಟಿ ವಿರೇಶನ ದೇವಸ್ಥಾನ ೧೨ ಮೈಲುವಿರುತ್ತೆ. ಇಲ್ಲಿಗೂ ಮಾರ್ಗದ ವ್ಯವಸ್ಥೆ ಚೆನ್ನಾಗಿದೆ. ಬಂಡೆಗಳೂ, ಮೋಟಾರಗಳೂ ಕೂಡ ಹೋಗುತ್ತವೆ. ನಾಗಲೂಟಿಯಿಂದ ಪೆದ್ದಚರುವಿಗೆ ೧೦ ಮೈಲವಿದೆ. ಪೆದ್ದಚರುವಿಗೆ ಹೋದಬಳಿಕ ಮೋಟರ, ಬಂಡೆಗಳು ಅಲ್ಲಿಯೇ ನಿಂತು ಬಿಡು ವವು. ಮುಂದೆ ಮೋಟರ ಬಂಡೆಗಳು ಹೋಗಲು ಮಾರ್ಗವಿಲ್ಲ. ಪೆದ್ದ ಚರುವಿಗೆ ಕೈಲಾಸವಾಸ ಕ್ಷೇತ್ರ ೧೦ ಮೈಲು ಇರುತ್ತೆ, ಇಲ್ಲಿಂದ ಭೀಮನ ಕೊಳ್ಳವನ್ನು ಸಂದರ್ಶಿಸಿ ಮುಂದೆ ನಾಲ್ಕು ಮೈಲು ಹೋದರೆ ಕ್ಷೇತ್ರದ ಮಹ ದ್ವಾರ, ಮಲ್ಲಿಕಾರ್ಜುನ ದರ್ಶನ ಮಾಡಿಕೊಳ್ಳುವ ಪದ್ಧತಿ ಅದೆ. ಸ್ಥೂಲ ಶರೀರದವರು, ರೋಗಿಗಳು, ಶಕ್ತಿವಿಹೀವರು, ಸೋಮಾರಿಗಳಿದ್ದ ವರೂ ೩ ರೂಪಾಯಿ ಕೊಟ್ಟರೆ ಪೆದ್ದಚರುವಿನಿಂದ ಡೋಲಿಯಲ್ಲಿ ಕೂಡ್ರಿಸಿ ಕೊಂಡು ಹೋಗುತ್ತಾರೆ. ಸಾಮಾನುಗಳಿದ್ದರೆ ಕೂಲಿಯವರು ಬೇಕಾದಷ್ಟು ಜನರು ಸಿಗುತ್ತಾರೆ. ಸಣ್ಣ ಹುಡುಗರು ಇದ್ದರೆ ಕೂಲಿಯನ್ನು ನೇಮಿಸಿ ಹುಡುಗರನ್ನು ಹೆಗಲ ಮೇಲೆ ಕೂಡ್ರಿಸಿಕೊಂಡು ಹೋಗುತ್ತಾರೆ. ರಸ್ತೆ

ಯಲ್ಲಿ ಕಳ್ಳರ ಹಾವಳಿ ಇಲ್ಲವೇ ಇಲ್ಲ. ಅಲ್ಲಲ್ಲಿಗೆ ಗೌರ್ಮೆಂಟ ಪೋಲಿಸರು ಹಾಗೂ ಸಂಚರೂ ಕೂಡ ಯಾತ್ರಿಕರಿಗೆ ಮೃಗಗಳು ಬಂದಾವೆಂದು ಬಿಲ್ಲು-ಬಾಣಗಳನ್ನು ಹಿಡಿದುಕೊಂಡು ಸಂರಕ್ಷಣೆಗೆ ಇವರೂ ನಿಂತಿರುತ್ತಾರೆ ಸಂಚರಾದರೂ ಈಗಿನ ವಾತಾವರಣ ಪ್ರಕಾರ ಇದ್ದಾರೆ. ಅಷ್ಟು ಕಾಡುಸ್ಥಿತಿ ಇಲ್ಲವೆಂದು ಬರೆಯುಬಹುದು. ನಂದ್ಯಾಲ ಸ್ಟೇಶನದಿಂದ ಹಿಡಿದು ಶ್ರೀಶೈಲ ಮುಟ್ಟುವ ಪರ್ಯಂತರ ನೀರಿನ ವ್ಯವಸ್ಥೆ ಹಾಗೂ ಅವರವರ ಧರ್ಮಪದ್ಧತಿ ಪ್ರಕಾರ ಅನ್ನಛತ್ರಗಳು ಇದ್ದೇ ಇರುತ್ತವೆ. ಹಾಗೂ ಮಿಠಾಯಿ, ಅಕ್ಕಿ, ಬ್ಯಾಳಿ, ಬೆಲ್ಲ, ಚಹ-ಕಾಫಿ ಅಂಗಡಿಗಳು ನಿತ್ಯ ಮುತ್ತೈದತನವನ್ನು ಹೊಂದಿರುತ್ತವೆ. ದೀವಿಗೆ ನೀರಿನ ನಳಗಳು ಹೋಗತಕ್ಕವರಿಗೆ ಬಹಳ ಅನುಕೂಲವಿರುವದು. ಮುಂದಾದರೂ ಸೌಕರ್ಯವನ್ನು ಗೌರ್ಮೆಂಟಿನವರು ಮಾಡುವದಕ್ಕೆ ಮಲ್ಲಿಕಾರ್ಜುನ ದರ್ಶನ ಮಾಡಿಕೊಳ್ಳುವ ಯಾತ್ರಿಕರಿಂದ ೧—೧೦—೦ ಆಣೆ ತಲೆಪಟ್ಟಿ ತೆಗೆದುಕೊಳ್ಳುತ್ತಾರೆ. ಈ ದೇವಸ್ಥಾನಕ್ಕೆ ಗೌರ್ಮೆಂಟನಿಂದ ೫ ಜನರು ಪಂಚರಿರುತ್ತಾರೆ. ಈ ಕ್ಷೇತ್ರ ವೀರಶೈವರ ಪೀಠವಿದ್ದು ಯಾತ್ರಕ್ಕೆ ವೀರಶೈವರಿಂದಲೇ ಬಹಳ ಲಾಭವದೆ. ವೀರಶೈವರ ಜನಸಂಖ್ಯೆಯೇ ಬಹಳ ಇರುತ್ತದೆ. ಶ್ರೀ ಗಿರಿರಾಜ ಸೂರ್ಯಸಿಂಹಾಸನಾಧೀಶ್ವರ **ಪಂಚ ಮಠಾಧ್ಯಕ್ಷ ಶ್ರೀ ೧೦೮ ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ** ಮಹಾಸ್ವಾಮಿಗಳವರು ಈ ಪೀಠಕ್ಕೆ ತಾರೀಖು ೭—೭—೧೯೪೦ ನೇ ದಿವಸ ಅಧಿಕಾರ ಹೊಂದಿದ ಬಳಿಕ ಜಗದ್ಗುರು ಪೀಠವನ್ನು ಹಾಗೂ ಆತ್ಮಕೂರಲ್ಲಿರುವ ಮಠವನ್ನು ಹಾಗೂ ಶ್ರೀಶೈಲ ಕ್ಷೇತ್ರದಲ್ಲಿರುವ ಮಠವನ್ನು ಕಟ್ಟಿಸಿ ಎಷ್ಟೋ ಊರ್ಜಿತ ಸ್ಥಿತಿಯಲ್ಲಿ ಪ್ರಸಿದ್ಧಿಗೆ ತಂದು ಶ್ರೀಶೈಲ ಕ್ಷೇತ್ರಕ್ಕೆ ಶಿವಯೋಗದಲ್ಲಿ ಸಕಲ ಗಜಾಶ್ವಾದಿ ಸಿಬ್ಬಂದಿಯೊಡನೆ ದಯಮಾಡಿಸಿ ಭಕ್ತರಿಗೆ ದರ್ಶನ ಕೊಟ್ಟು ಜಿಲ್ಲಾ ಕಲೆಕ್ಟರಸಾಹೇಬರು ಕೊಟ್ಟ ಹುಕುಂ ಪ್ರಕಾರ ಪ್ರತಿವರ್ಷ **೭೨ ಬಿರುದಾವಳಿ ಸಮೇತ ಅಡ್ಡಪಾಲಕಿ ಮಹೋತ್ಸವ** ಬಹು ವಿಜೃಂಭಣೆಯಿಂದ ನಡೆಯುವದು ಬಹು ಸ್ತುತ್ಯವಾದದ್ದು. ಕೇವಲ ಪಂಡಿತರಾದ ಮಹಾ ಜಗದ್ಗುರುಗಳ ಚಿತ್ತಕ್ಕೆ ಗುರುಪೀಠವನ್ನು ಜೀರ್ಣೋದ್ಧಾರ ಮಾಡಬೇಕೇಕೆಂದು ಮನಸ್ಸಿನಲ್ಲಿ ಸಂಕಲ್ಪ ಇರೋಣದರಿಂದ ಈ ಪೀಠವು **ಸೂರ್ಯನಂತೆ** ಬೆಳಗಲಿಕ್ಕೆ ಸಂದೇಹವಿಲ್ಲ.

ಈಗಾಗಲೇ ಶ್ರೀಶೈಲ ಮಹಾಕ್ಷೇತ್ರದಲ್ಲಿ ದಿನಾಂಕ ೨೨-೯-೧೯೫೫ ನೇ ಇಶ್ವಿ ದಿವಸ ಗೋರಕ್ಷಣ ಸ್ಥಾಪನವಾದ ನಂತರ ಶ್ರೀ ಮೇ|| ತಿಮ್ಮಾರಡ್ಡಿ ಮಂತ್ರಿಗಳವರ ಅಧ್ಯಕ್ಷತೆಯಲ್ಲಿ ಸಭೆಯು ನಡೆಯಿತು. ಶ್ರೀ ಪೂಜ್ಯ ಚಿಕ್ಕ ಮಣ್ಣೂರ ಮಹಾಸ್ವಾಮಿಗಳವರು ಆ ಸಭೆಯಲ್ಲಿ ವ್ಯಾಖ್ಯಾನ ಮಾಡಿದ ಸಾರಾಂಶವೇನಂದರೆ—ಅಧ್ಯಕ್ಷ ಮಹಾಶಯರೇ ಇತರ ಮಹೋದಯರೇ ನಿಮ್ಮೆಲ್ಲರಿಗೆ ಅಪ್ಪಣೆಕೊಡುವದೇನಂದರೆ ಪರಮ ಪವಿತ್ರವಾದ ಶ್ರೀಶೈಲ ಕ್ಷೇತ್ರ ಈ ನಾಡಿನಲ್ಲಿ ಮಹಾ ಪುರಾತನ ಕ್ಷೇತ್ರವಾಗಿದೆ. ಈ ಕ್ಷೇತ್ರದಂತೆ ಕೇದಾರ ಕಾಶೀ ಮೊದಲಾದ ಕ್ಷೇತ್ರಗಳು ಸಹಿತ ಪುರಾತನ ಕ್ಷೇತ್ರಗಳಾಗಿವೆ ಅಂತೇ ವೇದ ಹಾಗೂ ಪುರಾಣ ಆಗಮುಗಳಲ್ಲಿ ಸಹಿತ ವರ್ಣನಾತೀತವಾದ ಕ್ಷೇತ್ರಗಳಾಗಿವೇ || ಕೇದಾರನ್ ಮರಣಾನ್ ಮುಕ್ತಿಃ | ಕಾಶ್ಯಾಂ ಮರಣಾನ್ ಮುಕ್ತಿಃ ಶ್ರೀಶೈಲ ಶಿಖರಂದೃಷ್ಟ್ವಾ ಪುನರ್‌ಜನ್ಮನ ವಿದ್ಯತೆ ಎಂಬದಾಗಿ ಬಲವಾದ ಶಾಸ್ತ್ರ ಪ್ರಮಾಣವೇ ಇದಕ್ಕೇ ಸಾಕ್ಷಿಯಾಗಿವೇ ಕೇದಾರ ಕ್ಷೇತ್ರ ದಲ್ಲಿ ಯಾರು ಮರಣವನ್ನು ಹೊಂದುವರೋ ಅವರಿಗೇ ಮುಕ್ತಿ ಆಗುತ್ತದೆ. ಇದಕ್ಕೆ ಪ್ರಮಾಣವೇನಂದರೆ ಇದೇ ಶ್ರೀಶೈಲ ಕ್ಷೇತ್ರದಲ್ಲಿ ಹಿಂದಕ್ಕೆ ಧರ್ಮಾವತಾರಿಗಳೂ ಪರಾಕ್ರಮಿಶಾಲಿಗಳೂ ಆದ ಪಂಚಪಾಂಡವರು ಇಲ್ಲಿಗೇ ಆಗಮಿಸಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಯ ಶ್ರೀ ಮಾತಾಭ್ರಮರಾಂಬಾ ಮಹಾದೇವಿಯ ದರ್ಶನ ಮಾಡಿಕೊಂಡು ಉಭಯರ ಪೂಜೆಯನ್ನು ಮಾಡಿ ಆಶೀರ್ವಾದ ಪಡೆದುಕೊಂಡು ಯೋದ ಸ್ಮರಣಾರ್ಥವಾಗಿಯೇ ಪಂಚ-ಪಾಂಡವರ ಹೆಸರಿನ ಮೇಲೆ ಐದು ಶಿವಲಿಂಗಗಳ ದೇವಾಲಯಗಳು ಯಾತ್ರಿಕರಿಗೇ ದರ್ಶನೀಯಗಳಾಗಿ ಮೆರೆಯುತ್ತವೆ. ಇಂತಹ ಪಾಂಡವರು ಕೇದಾರ ಕ್ಷೇತ್ರದಲ್ಲಿಯೇ ಪರಂಧಾಮ ಹೊಂದಿ ಆ ಕ್ಷೇತ್ರದಲ್ಲಿ ಗದ್ದಿಗೆಗಳಾಗಿ ಮಾದರಿ ಉಳಿದಿರುವವು. ಈ ಕಾಶೀ ಕ್ಷೇತ್ರದಲ್ಲಿ ಸಹಿತ ಯಾವ ಪ್ರಾಣಿಗಳೇ ಆಗಲಿ ಸ್ತ್ರೀ-ಪುರುಷರಾಗಲಿ ಮರಣ ಹೊಂದಬೇಕಾದರೆ ಬಲ ಕಿವಿ ಮೇಲ ಮಾಡಿಯೇ ಮರಣವನ್ನು ಹೊಂದಿ ಮುಕ್ತಿಯುತರಾಗುತ್ತಾರೆ. ಶ್ರೀಶೈಲ ಕ್ಷೇತ್ರದ ಶಿಖರವನ್ನು ನೋಡಿದ. ಮಾನವರಿಗೇ || ಯೇಕೆನ ಜನ್ಮನಾಮುಕ್ತಿಃ ಎಂಬಂತೇ ಒಂದೇ ಜನ್ಮದಲ್ಲಿ ಮುಕ್ತಿ ಆಗುತ್ತದೆ. ಹಿಂದಿನ ಕಾಲಗಳಲ್ಲಿ ಋಷಿಮುನಿಗಳು ಷಡಕ್ಷರ ಃ ವಿ

ಗಳು ಘನಮಠ ಶಿವಯೋಗಿಗಳು ಸರ್ಪಭೂಷಣ ಶಿವಯೋಗಿಗಳು ಎಷ್ಟೋ ನಾನಾ ಭಾಗಗಳ ಕವಿಗಳು ತಮ್ಮ ಗ್ರಂಥಗಳಲ್ಲಿ ಸಹಿತ ಮುಕ್ತ ಕಂಠದಿಂದ ಸ್ತೋತ್ರ ಮಾಡಿದ್ದಾರೆ ಸಪ್ತಸಮುದ್ರಗಳನ್ನೇ ಪಾನಮಾಡಿ ಮೂತ್ರದ್ವಾರ ದಿಂದ ಬಿಟ್ಟಿರುವ ಅಗಸ್ತ್ಯಮಹ ಋಷಿಗಳಿಗೇ ಶಿವದೀಕ್ಷೆಯನ್ನು ಮಾಡಿದ ಪರಶಿವನ ಸದ್ಯೋ ಜಾತ ಮುಖದಲ್ಲಿ ಹುಟ್ಟಿ ಹೈದರಾಬಾದ ಸ್ಟೇಟಿಗೆ ಸೇರಿದ ಶ್ರೀ ಕೊಲ್ಲಿಪಾಕಿ ಸೋಮನಾಥೇಶ್ವರ ಲಿಂಗದಲ್ಲಿ ಪ್ರಾದುರ್ಭವಿಸಿದ ಶ್ರೀ ೧೦೦೮ ಜಗದ್ಗುರು ರೇಣುಕಾಚಾರ್ಯರು ತಮ್ಮ ಉತ್ತರಾಧಿಕಾರಿಗ ಳಾದ ಶ್ರೀ ರುದ್ರಮುನಿ ಶಿವಾಚಾರ್ಯರನ್ನು ಅಕಾಶ ಮಾರ್ಗವಾಗಿ ಆಗಮಿಸಿ ಶ್ರೀ ಕ್ಷೇತ್ರವನ್ನು ಸಂದರ್ಶನಮಾಡಿಕೊಂಡ ಸುಕ್ಷೇತ್ರವಿದು ಸ್ಮಾರ್ಥಮತ ಸ್ಥಾಪನಾಚಾರ್ಯರಾದ ಶ್ರೀ ಜಗದ್ಗುರು ಶಂಕರಾಚಾರ್ಯರಿಗೆ ಇದೇ ಕ್ಷೇತ್ರದಲ್ಲಿ ಚಂದ್ರ ಮೌಳೀಸ್ವರ ಲಿಂಗವನ್ನು ಹಾಗೂ ರಜತವಾದ ಗಣಪತಿಯ ಮೂರ್ತಿಯನ್ನು ಸದಾ ಪೂಜೆ ಮಾಡಿ ಮುಕ್ತಿಯನ್ನು ಪಡೆಯಬೇ-ಕೆಂದು ದಯಪಾಲಿಸಿದ್ದಾರೆ ಎಷ್ಟೋ ಜನ ಋಷಿಗಳು ಪರ್ಣ ಕುಠಾರ ಹಾಕಿ ಕೊಂಡು ಪಾತಾಳಗಂಗಾ ಸ್ನಾನ ಮಾಡುತ್ತ ಇಲ್ಲಿ ಅನುಷ್ಠಾನ ಮಾಡಿ ಮುಕ್ತಿ ಪಡೆದ ಮಹಾ ಪವಿತ್ರ ಕ್ಷೇತ್ರವಾಗಿರುವದು ಮಹಾ ವೈರಾಗ್ಯಶಾಲಿನಿ ಯಾದ ಅಕ್ಕ ಮಹಾದೇವಿ ದಿಗಂಬರವಾಗಿ ತನ್ನ ಮಸ್ತಕದಲ್ಲಿರುವ ಕೂದಲ ಗಳನ್ನೇ ಬಟ್ಟೆಯೋಪಾದಿ ಮಾಡಿ ಶರೀರ ತುಂಬ ಹೊದ್ದುಕೊಂಡು ನಿತ್ಯ ಪಾತಾಳ ಗಂಗಾದಲ್ಲಿ ಸ್ನಾನ ಶಿವಾರ್ಚನವಂಗೈದು ಕದಳೀ ವನದಲ್ಲಿಯೇ ವಾಸ ಮಾಡುತ್ತ ಹಗಲಿರಳು ಮಲ್ಲಿಕಾರ್ಜುನನ ಧ್ಯಾನ ಮಾಡುತ್ತ ಅವನ ದರ್ಶನ ಮಾಡಿಕೊಂಡು ಮೋಕ್ಷ ಪಡೆದು ಹೆಸರುವಾಸಿಯಾದಳು ಶ್ರೀ ಮಾತಾ ಹೇಮರಡ್ಡಿ ಮಲ್ಲಾಂಬೆ ಇದೇ ಕ್ಷೇತ್ರದಲ್ಲಿ ಗೋವುಗಳ ಸೇವೆ-ಯನ್ನು ಮಾಡುತ್ತ ಅವುಗಳ ಸೆಗಣಿಯನ್ನು ಹಿಡಿದು ಕಿಟ್ಟ ಹಾಕಿದ್ದು ಶ್ರೀ ಮಲ್ಲಿಕಾರ್ಜುನನ ಧ್ಯಾನ ಮಾಡಿದರೆ ಆ ಕಿಟ್ಟವೇ ಬಂಗಾರದಿಂದ ಕೂಡಿ ದ್ದಾಯಿತು. ಈಕೆಯ ಭಕ್ತಿಗೆ ಮೆಚ್ಚಿ ಶ್ರೀ ಮಲ್ಲಿಕಾರ್ಜುನ ದರ್ಶನ ಕೊಟ್ಟು ಕೈವಲ್ಯ ಪದವಿ ಕೊಟ್ಟ ವಿಷಯ ಲೋಕಕ್ಕೆ ಪ್ರಸಿದ್ಧವಾಗಿರುವದು ಸೊಲ್ಲಾ ಪೂರ ಸಿದ್ಧರಾಮ ಶಿವಯೋಗಿ ಶ್ರೀಶೈಲದಲ್ಲಿ ಬಂದು ಅನುಷ್ಠಾನ ಮಾಡಿ ಮಲ್ಲಿಕಾರ್ಜುನನ ಸಂದರ್ಶನ ಮಾಡಿಕೊಳ್ಳಬೇಕೆಂದು ಹಂಬಲ ಪಟ್ಟು ದೇವಾ

ಲಯದಲ್ಲಿ ಹೋದಾಗ್ಯೂ ದರ್ಶನವಾಗಲಿಲ್ಲಾ ಶ್ರೀಶೈಲ ಗುಡ್ಡದ ಮೇಲಿಂದ ಯಲ್ಲೋ ಮಲ್ಲಿಕಾರ್ಜುನ ಸ್ವಾಮಿಯೇ ಕಾಪಾಡು ಪ್ರಸನ್ನನಾಗೆಂದು ಪಾತಾಳ ಗಂಗಾದಲ್ಲಿ ಹಾರಲು ಶ್ರೀ ಮಲ್ಲಿಕಾರ್ಜುನನು ಕೈಹಿಡಿದು ಅಪ್ಪಿ-ಕೊಂಡು ಮೋಕ್ಷ ಸಾಮ್ರಾಜ್ಯವನ್ನೇ ದಯಪಾಲಿಸಿದ ಕುರುಹು ಸೊಲ್ಲಾಪೂರದಲ್ಲಿ ಮಹಾ ಗುರುವೆನಿಸಿ ದೇವರಾದನು ಇದೇ ಆಂಧ್ರ ನಾಡಿನಲ್ಲಿ ತಿರುಪತಿ ಕ್ಷೇತ್ರ ಒಳ್ಳೇ ಪ್ರಕಾಶಮಾನವಾಗಿ ಬೆಳುಗುತ್ತಿರುವದು ಸಂತ್ರೋಷವೇ ಸರಿ ॥ ಶಿವಾಯ ವಿಷ್ಣುರೂಪಾಯ ವಿಷ್ಣು ಶಿವರೂಪಾಯ ಎಂಬ ಶಾಸ್ತ್ರ ಪ್ರಮಾಣದಂತೆ ಶ್ರೀ ಮಲ್ಲಿಕಾರ್ಜುನನಿಗೇ ತಿರುಪತಿ ವಿಷ್ಣುಮೂ-ರ್ತಿಗೇ ಯಾವ ತರಹ ಭೇದವಿಲ್ಲಾ ಒಂದಕ್ಕೊಂದು ಸಮಂಥಗಳಿವೆ ಹ್ಯಾಗೆಂದರೆ ನಿಮ್ಮಗಳ ಹೊಟ್ಟೆ-ಬೆನ್ನು ಅತಿ ಸಮೀಪದಲ್ಲಿಯೇ ಕೂಡಿರು-ವವೋ ಅದರಂತೆ ನಿಮ್ಮ ಆಂಧ್ರ ಪ್ರದೇಶದಲ್ಲಿ ತಿರುಪತಿ ಕ್ಷೇತ್ರವಾಗಲಿ ಶ್ರೀಶೈಲ ಕ್ಷೇತ್ರವಾಗಲಿ ಎರಡೂ ಒಂದೆ ಸ್ವರೂಪವಾಗಿರುವವು ಬೇರೆ ಎಂಬ ದಾಗಿ ಯಾರೂ ತಿಳಿಯಬಾರದು ತಿರುಪತಿ ಕ್ಷೇತ್ರ ಸಂಪತ್ತಿನಿಂದ ಕೂಡಿದೆ ಶ್ರೀಶೈಲ ಕ್ಷೇತ್ರಕ್ಕೆ ಯಾವ ಆದಾಯವಿಲ್ಲವೆಂದು ನೀವೆಲ್ಲರು ತಿಳಿಯಬೇಡಿರಿ ಶ್ರೀ ಮಲ್ಲಿಕಾರ್ಜುನನಾದ ಈಶ್ವರನು ಬಡವನಲ್ಲಾ ॥ ಈಶ್ವರೋಭಾವಃ ಐಶ್ವರ್ಯ: ಎಂಬುದಾಗಿ ಸಮಾಸವು ಹೇಳುತ್ತಿರುವದು ಈಶ್ವರನು ಸಂಪತ್ತಿ-ನಿಂದ ಕೂಡಿದರೂ ಆ ಸಂಪತ್ತನ್ನು ನಮ್ಮಗಳಿಗೇ ಹಂಚಿಕೊಟ್ಟಿರುವನು. ಕಬ್ಬಿನಲ್ಲಿ ಟೆಂಗ್ಗಿನಕಾಯಿಗಳಲ್ಲಿ ಸಿಹೀ ರಸವನ್ನೇ ತುಂಬಿದ್ದಾನೆ. ಸಕಲ ವಸ್ತುಗಳನ್ನು ಮಾಡಿಕೊಟ್ಟದ್ದಾನೆ. ಅಂತೇ ಈ ಮಲ್ಲಿಕಾರ್ಜುನನ ಉಪಕಾರ ಬಹಳವಾಗಿದೆ ಎಂದು ನಾವೆಲ್ಲರು ಇಷ್ಟಲಿಂಗಗಳನ್ನೇ ದೇಹದಲ್ಲಿ ಧಾರಣ ಮಾಡಿಕೊಂಡು ನಿತ್ಯದಲ್ಲಿ ಪೂಜಿಸುವೆವು. ತಿರುಪತಿ ವಿಷ್ಣು ಮೂರ್ತಿಯೂ ಕೂಡ ಸರ್ವಸ್ತರನ್ನು ರಕ್ಷಣೆ ಮಾಡುವ ಅಧಿಕಾರ ವಹಿಸಿಕೊಂಡಲ್ಲಿ ವೈಷ್ಣವ ಶ್ರೀ ವೈಷ್ಣವ ಧರ್ಮದವರು ಸಹಿತ ಯದ್ನೋಪವೀತವನ್ನು ಹಾಕಿಕೊಂಡು ಪೂಜಿಸುತ್ತಾರೆ. ॥ ಭಿಕ್ಷಾಂದೇಹಿ ಕೃಪಾವಲಂಭನ ಕರೀಮಾತಾನ್ ಪೂರ್ಣೇಶ್ವರಿ ಎಂಬ ಪ್ರಮಾಣದಂತೆ ಶ್ರೀ ಮಲ್ಲಿಕಾರ್ಜುನನೇ ಭಿಕ್ಷುಕ ಲೀಲೆಯನ್ನು ಧರಿಸಿ ಭ್ರಮರಾಂಬಾದೇವಿಯಲ್ಲಿ ಭಿಕ್ಷೆಯನ್ನು ನೀಡಿಸಿ ಕೊಂಡು ಜೀವನ ಸಾಗಿಸುತ್ತಾನೆಂಬುದು ಬೃಹಸ್ತೋತ್ರ ರತ್ನಾಕರವೇ ಸಾಕ್ಷಿ

ಯಾಗಿರುವವು ॥ ತೇನುವಿನ ತೃಣಮುಪಿನ ಚಲತಿ ॥ ಶಿವನ ಪ್ರೇರಣೆ ಇಲ್ಲದೇ ಒಂದು ಹುಲ್ಲು ಕಡ್ಡಿ ಸಹಿತ ಕಂಪಿಸುವದಿಲ್ಲ ಸೂರ್ಯಚಂದ್ರಮರು ಬೆಳಗಲಾರರು ಜಲವು ತೊಯ್ಯಿಸಲಾಗದು ಅಗ್ನಿ ದೇವನು ಸಹಿತ ಸುಡನು ವಾಯುದೇವನು ಬೀಸಲಾರ ಪ್ರಸಾದ ಕೂಡ ಎಂದಿಗೂ ಸಿಗಲಾರದು ಶ್ರೀ ಮಲ್ಲಿಕಾರ್ಜುನ ಸ್ವಾಮಿಯ ಮಹತ್ವ ಪ್ರಭಾವವೇ ನಮೆಲ್ಲರ ಹೃದಯ ಕಮಲದಲ್ಲಿ ಪ್ರವೇಶ ಮಾಡಿದ ಬಲದಿಂದಲೇ ಜಗತ್ತಿನ ಕಾರ್ಯಗಳು ಸುಗಮವಾಗಿ ನಡೆಯುವದಲ್ಲದೇ ಈ ಕ್ಷೇತ್ರದ ಕಾರ್ಯಗಳು ಫಲಕಾರಿಗಳಾಗುವವು. ಇನ್ನಾದರೂ ॥ ಪ್ರಯತ್ನಾಂತೇ ಪರಮೇಶ್ವರಃ ಎಂಬ ನೀತಿಯಂತೇ ನಿಮ್ಮೆಲ್ಲರ ಇಂದ್ರಿಯ ಸಾಮರ್ಥ್ಯ ಇರುವಾಗಲೇ ಪ್ರಯತ್ನಪಡುವ ಮಾನವರಿಗೇ ದೇವರ ಕೃಪೆ ಬಲವಾಗಿರುವದು ಶ್ರೀ ಶ್ರೀ ಶ್ರೀ ಗಿರಿರಾಜ ಸೂರ್ಯ ಸಿಂಹಾಸನಕ್ಕೇ ಅಧಿಪತಿಗಳಾದ ಶ್ರೀ ೧೧೦೦೮ ಜಗದ್ಗುರುವಾಗೀಶ ಪಂಡಿತಾರಾಧ್ಯ ರಾಜೇಂದ್ರ ಶಿವಾಚಾರ್ಯ ಮಹಸ್ವಾಮಿಗಳವರು ಹಾಗೂ ಅನಂತಪುರ ಶ್ರೀ ಮೇರ್ಬಾನ್ ಕಲೆಕ್ಟರ್ ಜೂಗಪ್ಪನವರು ಇನ್ನುಳಿದ ಮೇಂಬರರು ಗೌರ್ಮೆಂಟಿನವರ ಸಹಾಯದಿಂದ ಎಷ್ಟೋ ಪ್ರಯತ್ನವನ್ನು ಮಾಡಿ ಡಂಬರ ರೋಡ್ ಮಾಡಿಸಿ ಕೀರ್ತಿ ಪಡೆದಿರುವರು ತಿರುಪತಿ ಕ್ಷೇತ್ರದಂತೆ ಶ್ರೀಶೈಲ ಕ್ಷೇತ್ರವಾದರೂ ಒಂದು ಪಟ್ಟಣದಂತೆ ಮಾಡಿ ಮಹಾಕ್ಷೇತ್ರ ಸೂರ್ಯನಂತೆ ಬೆಳಗುವಹಾಗೆ ಮಾಡುವ ಶಕ್ತಿಯನ್ನು ದಯಾಮಯನಾದ ಶ್ರೀ ಮಲ್ಲಿಕಾರ್ಜುನ ಸ್ವಾಮಿಯು ನಿಮ್ಮೆಲ್ಲರ ಶರೀರ ಆರೋಗ್ಯವಿಟ್ಟು ಸುಖ ಸಂಪತ್ತು ಕೊಡಬೇಕೆಂದು ಪ್ರಾರ್ಥಿಸಿ ನಮ್ಮ ವ್ಯಾಖ್ಯಾನವನ್ನು ಜಯಜಯಕಾರದೊಡನೆ ಸಮಾಪ್ತ ಮಾಡುತ್ತೇವೆಂದು ಎಲ್ಲಾ ಆಫೀಸರಿಗೇ ಪರಿಣಾಮಕಾರಿಯಾಗುವಂತೆ ತಮ್ಮ ಅಮೃತವಾಣಿಯಿಂದ ಶಾಸ್ತ್ರಸಿದ್ಧಾಂತವಾದ ವಿಷಯಗಳನ್ನೇ ಬೋಧಮಾಡಿದ ನಂತರ ಮಂತ್ರಿಮಂಡಳದವರು ಪರಮಾವಧಿ ಸಂತೋಷವುಳ್ಳವರಾಗಿ ಮಹಾ ಸ್ವಾಮಿಗಳವರಿಗೇ ಬಹು ಸುಂದರವಾದ ಪುಷ್ಪಮಾಲೆಯನ್ನು ಹಾಕಿ ಕರತಾಡನ ಮಾಡುತ್ತ ಗೌರವಿಸಿದರು. ಈ ಮಹಾ ಕ್ಷೇತ್ರದ ಮಹಿಮೆಯನ್ನು ಎಷ್ಟು ಹೇಳಿದರೂ ಅಲ್ಪವೇ ಸರಿ. ಶ್ರೀ ಕ್ಷೇತ್ರಕ್ಕೆ ಬರತಕ್ಕ ಯಾತ್ರಿಕರು **ಶ್ರೀ ೧೧೦೦೮ ಜಗದ್ಗುರುವಾಗೀಶ ಪಂಡಿತಾರಾಧ್ಯ ರಾಜೇಂದ್ರ ಶಿವಾಚಾರ್ಯರಲ್ಲಿ**

ಶ್ರೀ ಮಲ್ಲಿಕಾರ್ಜುನ ಸ್ವಾಮಿಯಲ್ಲಿ ಲೋಕಮಾತೆಯಾದ ಭ್ರಮ-ರಾಂಬಾ ದೇವಿಯಲ್ಲಿ ಭಕ್ತಿ ವಹಿಸಿ ಧನ್ಯರಾಗಬೇಕೆಂದು ಸೂಚನೆಯಂ ಕೊಟ್ಟು ನಮ್ಮ ವ್ಯಾಖ್ಯಾನ ಸಮಾಪ್ತ ಮಾಡುತ್ತೇವೆ.



ಶ್ರೀ

॥ ಶ್ರೀ ನಮಃ ಪಂಚಜಗದ್ಗುರುಭ್ಯಃ ॥

ಓಂ

# ಈ ಸೂರ್ಯ ಸಿಂಹಾಸನ ಜೀರ್ಣೋದ್ಧಾರ



ಶ್ರೀ ಜಗದ್ಗುರು ವಾಗೀಶ ರಾಜೇಂದ್ರ ಶಿವಾಚಾರ್ಯ ಮಹಸ್ವಾಮಿಗಳು

ಗಿರಿರಾಜ ಸೂರ್ಯ ಸಿಂಹಾಸನ.

ಗುಂತಗಲ್ಲಿನಲ್ಲಿ ಹಾಗೂ ಆ ಕ್ಕಿಕೂರಲ್ಲಿ ಪೀಠಗಳನ್ನು ಬಹು ಸುಂದರ ನಾಗಿ ಕಟ್ಟಿಸಿದ್ದಾರೆ ಎಲ್ಲಾ ಭಾಗಗಳ ಕಡೆಗೆ ದರ್ಶನಾರ್ಥವಾಗಿ ಬರುವ ಶಿಷ್ಯರಿಗೆ ಅನ್ನೋದಕ ಕೊಡುವದಕ್ಕೆ ದಾಸೋಹ ಇಟ್ಟಿದ್ದಾರೆ. ಗುಂತಗಲ್ಲಿ ನಲ್ಲಿ ಶ್ರೀ ಜಗದ್ಗುರುಗಳವರು ಅನೇಕ ಕಡೆಗೆ ಹೈಸ್ಕೂಲ-ಕಾಲೇಜುಗಳನ್ನು ಸ್ಥಾಪನೆ ಮಾಡಿದ್ದಾರೆ. ೧೯೬೬ ನೇ ಗುಂತಗಲ್ಲ ಪೀಠವನ್ನು ಕಟ್ಟಿಸಿದ ಸಂತೋಷಕ್ಕಾಗಿ ರಜತಮಹೋತ್ಸವ ಕಾರ್ಯಕ್ರಮ ಇಟ್ಟುಕೊಂಡು ಶ್ರೀ ೧೦೦೮ ಜಗದ್ಗುರು ಚತುರಾಚಾರ್ಯರನ್ನು ದಯಮಾಡಿಸಿಕೊಂಡು ಹಾಗೂ ನೂರಾರು ಜನ ಶ್ರೀ ಪೂಜ್ಯ ಪಟ್ಟಚರಾಧಿಕಾರಿಗಳನ್ನು ಕೆಲ ಜನ ಪಂಡಿತ ಶಾಸ್ತ್ರಿಗಳನ್ನು ನಾನಾಭಾಗಗಳ ಭಕ್ತಮಾಹೇಶ್ವರ ಸ್ತ್ರೀ-ಪುರುಷರನ್ನು ಬರಮಾಡಿಸಿಕೊಂಡು ಅಡ್ಡಪಲ್ಲಕ್ಕಿ ಮಹೋತ್ಸವ ಬಹು ವಿಜ್ರಂಭಣೆಯಿಂದ ಸಕಲ ಬಿರುದಾವಳಿ ಸಮೇತ ಮಾಡಿಸಿ ಬಹು ಹೆಸರುವಾಸಿಗಳಾದರು ಆಗ-ಮಿಸಿದ ಯಾವತ್ತರಿಗೂ ದಾಸೋಹದ ವ್ಯವಸ್ಥೆ ನೀರಿನ ನಳಗಳ ಸೌಕರ್ಯ ಬಹಳ ಚನ್ನಾಗಿ ಮಾಡಿಸಿದ್ದರು ಇಂತಹ ಮಂಗಲಕಾರ್ಯಗಳನ್ನು ಆಗಾಗ ಮಾಡಿಸುತ್ತ ಘನತರವಾದ ಕೀರ್ತಿ ಪಡೆಯುತ್ತಲೇ ಇರುವರು. ಅನೇಕ ಕಡೆಗೆ ವಿದ್ಯಾರ್ಥಿಗಳಿಗೆ ಬೋರ್ಡಿಂಗಗಳನ್ನು ಇಟ್ಟಿರುತ್ತಾರೆ ಪ್ರತಿಯೊಂದು ಗ್ರಾಮಗಳಿಗೇ ಸಿಬ್ಬಂದಿ ಸಮೇತವಾಗಿ ದಯಮಾಡಿಸಿ ಸಕಲ ಧರ್ಮದವರಿಗೇ ತಮ್ಮ ಅಮರವಾಣಿಯಿಂದ ಬೋಧಮಾಡಿ ಶಿಷ್ಯರ ಅಜ್ಞಾನಾಂಧಕಾರ ವನ್ನು ಹೊಡೆದೋಡಿಸಿ ಸುಜ್ಞಾನಿಗಳನ್ನಾಗಿ ಮಾಡಿರುವ ಶ್ರೋತ್ರೀಯ ಬ್ರಹ್ಮನಿಷ್ಠ ಜಗದ್ಗುರುಗಳೇ ಇವರೆಂದು ಬರೆದರೆ ಅತಿಶಯೋಕ್ತಿ ಆಗಲಾರದು ಈ ಪೂಜ್ಯ ಯತಿಕುಲ ತಿಲಕರ ವಿಷಯವಾಗಿ ಎಷ್ಟೂ ಬರೆದರೂ ತೀರದು ಶ್ರೀಶೈಲ ಮಹಾ ಕ್ಷೇತ್ರದ ಯಾತ್ರಕ್ಕೆ ಆಗಮಿಸುವ ಸಕಲ ಧರ್ಮದವರಿಗೇ ಪ್ರತಿವರ್ಷ ತಪ್ಪದೇ ವೀರಶೈವ ಮಹಾ ಸಭೆಯನ್ನು ಏರ್ಪಡಿಸಿ ಕೆಲ ಪಂಡಿತ ರಿಂದ ವ್ಯಾಖ್ಯಾನ ಮಾಡಿಸುವದಲ್ಲದೇ ಸ್ವತಃ ಶ್ರೀ ಜಗದ್ಗುರು ಸಾರ್ವಭೌ-ಮರೇ ಪಂಡಿತರೂ ವರಕವಿಗಳೂ ಇರೋಣದರಿಂದ ಆಗಮ ತತ್ವಗಳ ಉದಾಹರಣೆಗಳನ್ನು ಕೊಡುತ್ತ ಶಿಷ್ಯಮಂಡಳಿಗೆ ಸದ್ಬೋಧಾಮೃತವನ್ನು ಮಾಡುವದು. ಒಳ್ಳೇ ಸ್ಲಾಘನೀಯವೇ ಸರಿ. ಹಿಂದಕ್ಕೆ ಇದೇ ಶ್ರೀಶೈಲ ಮಹಾ ಕ್ಷೇತ್ರದಲ್ಲಿ ವೀರಶೈವ ಮಹಾಮತ ಸ್ಥಾಪನಾಚಾರ್ಯರಾದ ಶ್ರೀ

ಶ್ರೀ ೧೦೦೮ ಜಗದ್ಗುರು ಪಂಚಾಚಾರ್ಯರು ಅನುಷ್ಠಾನ ಮಾಡಿದ್ದು ಈ ಕ್ಷೇತ್ರದಲ್ಲಿ ಐದು ಪೀಠಾಚಾರ್ಯರ ಹೆಸರಿನಿಂದ ಪಂಚಮಠಗಳು ಶಿಲೆ ಗಳಿಂದ ಕಟ್ಟಿದ ಪೀಠಗಳು ಅವೆ. ಅವುಗಳಲ್ಲಿ ಯಾರೂ ವಾಸಮಾಡದೇ ಇರೋಣದರಿಂದ ಶಿಥಿಲಗಳಾಗಿವೆ. ಈಗಿರುವ ಪಂಚ ಪೀಠಾಚಾರ್ಯರು ರಿಪೇರಿ ಮಾಡಿಸಿದರೆ ಎಲ್ಲರಿಗೂ ಉಪಯೋಗವಾಗುವವು. ಈ ಕ್ಷೇತ್ರ ದಿನೇ ದಿನೇ ವಿಶಾಲವಾಗಿ ಇಮಾರತಿ ಕಟ್ಟಿಸಿ ದೊಡ್ಡ ಪಟ್ಟಣವಾಗುವ ಸ್ಥಿತಿಯ-ಲ್ಲಿದ್ದು ಈಗಾಗಲೇ ಎಷ್ಟೋ ಗ್ರಾಮದವರು ಇಲ್ಲಿ ವಾಸ ಮಾಡುತ್ತ ಇರು ವರು. ಥಳಥಳವಾಗಿ ಬೆಳಗುವ ವಿದ್ಯುದ್ದೀಪಗಳು ನೀರಿನ ನಳಗಳ ವ್ಯವಸ್ಥೆ ಒಳ್ಳೇ ಅನುಕೂಲವಾಗಿರುವಾಗ್ಯೆ ಶ್ರೀ ಜಗದ್ಗುರು ಪಂಚಪೀಠಾಚಾರ್ಯರು ಈ ಕ್ಷೇತ್ರಕ್ಕೆ ಆಗಮಿಸದೆ ತಮ್ಮ ಪೀಠಗಳನ್ನು ನೋಡದೇ ಇರುವದು ದುರ್ಭಾಗ್ಯವೇ ಸರಿ ಸ್ವತಃ ನೋಡಿದ ವಿಷಯಗಳನ್ನೇ ಬರದೀವಿ ಇತ್ತಕಡೆ ಆಗಮಿಸುವ ಮನಸ್ಸು ಮಾಡಿರಿ ಇಂತಹ ಗುಡ್ಡದಕಾಡ ಅರಣ್ಯದಲ್ಲಿ ಅಗ್ಗ ಕಲ್ಲಿನ ತೊಲೆಗಳನ್ನು ಕಲ್ಲಿನ ಕಂಬಗಳನ್ನು ಹ್ಯಾಗೆ ತಂದರೋ ತಿಳಿಯದು. ನೋಡುವವರು ಆಶ್ಚರ್ಯವಾಗುತ್ತಾರೆ. ಈಗ ಅಂತಹ ಶಿಲಾದ ತೊಲೆಗಳು ಕಂಬಗಳು ಲಕ್ಷ ರೂಪಾಯಿ ಕೊಟ್ಟರೂ ಆಗಲಾರವು ಕ್ಷೇತ್ರ ಬೆಳೆಯುತ್ತದೆ ಅಲ್ಲಿ ವಿಶಾಲವಾದ ಪ್ಲಾಟುಗಳು ಸಹಿತ ದೊರೆಯಲಾರವು ನಿಮ್ಮ ಪೀಠ ಗಳನ್ನು ರಿಪೇರಿ ಮಾಡಿಸಿ ಸ್ವಾಧೀನವಾಗಿಟ್ಟುಕೊಳ್ಳಿರಿ ಕ್ಷೇತ್ರಕ್ಕೆ ಒಮ್ಮೆ ಆದರೂ ದಯಮಾಡಿಸಿ ಸ್ವತಃ ನೋಡಿರೆಂದು ಅರಿಕೆ ಮಾಡಿಕೊಂಡಿದ್ದೇವೆ. ಈ ಕ್ಷೇತ್ರದ ಯಾತ್ರಾಕ್ಕೆ ಬರುವ ಶಿಷ್ಯರಿಗೇ ಈಗಿರುವ ಶ್ರೀ ೧೦೦೮ ಜಗ-ದ್ಗುರು ವಾಗೀಶ ಪಂಡಿತಾರಾಧ್ಯ ರಾಜೇಂದ್ರ ಶಿವಾಚಾರ್ಯ ಮಹಾ ಸ್ವಾಮಿ ಗಳವರು ದಾಸೋಹ ಇಡಲಿಕ್ಕೆ ದೊಡ್ಡ ಹಾಲನ್ನೇ ಕಟ್ಟಿಸಿ ಮಹೋಪಕಾರ ಮಾಡಿದ್ದಾರೆ. ಯಾತ್ರಿಕರು ದಾಸೋಹದಲ್ಲಿ ಭೋಜನ ಮಾಡಿಕೊಂಡು ಹೋಗುವದಕ್ಕೆ ಅನ್ನೋದಕ ವ್ಯವಸ್ಥೆ ಒಳ್ಳೇ ಸುಗಮವಾಗಿಟ್ಟಿದ್ದಾರೆ. ಎಷ್ಟೋ ಜನಗಳು ಬಂದರೂ ಸಹಿತ ವಾಸಮಾಡಲಿಕ್ಕೆ ಖೋಲಿಗಳನ್ನು ಕಟ್ಟಿಸಿದ್ದಾರೆ. ದೀರ್ಘ ಪ್ರಯತ್ನ ಮಾಡಿ ಜನರಿಗೆ ಮಹೋಪಕಾರ ಮಾಡಿದ ಶ್ರೀ ಜಗದ್ಗುರುಗಳನ್ನು ನಾವು ಎಷ್ಟು ಕೊಂಡಾಡಿದರೂ ತೀರದು ಈ ಪೂಜ್ಯ ತಪಸ್ವಿಗಳಾದ ಜಗದ್ಗುರು ಮಹಾಸ್ವಾಮಿಗಳವರ ಶರೀರಕ್ಕೆ ಶ್ರೀ

ಜಗದ್ಗುರು ಪಂಡಿತಾರಾಧ್ಯರು ಸರ್ವೇಶ್ವರನಾದ ಮಲ್ಲೇಶ್ವರನು ಆರೋಗ್ಯ ವಾಗಿಟ್ಟು ಇನ್ನೂ ಇವರಿಂದ ಶ್ರೀಶೈಲ ಮಹಕ್ಷೇತ್ರ ಹಾಗೂ ಶ್ರೀ ಗಿರಿರಾಜ ಸೂರ್ಯ ಸಿಂಹಾಸನ ಜಗತ್ತಿನಲ್ಲಿ ಸೂರ್ಯನಂತೆ ಬೆಳಗಿಬಾಳಿ ಪ್ರಖ್ಯಾತ ವಾಗಲೆಂದು ಹಾಡಿ ಹರಿಸು ಈ ಗ್ರಂಥಕ್ಕೆ ವಿರಾಮ ಕೊಡುತ್ತೇವೆ.

|| ಇತಿ ಶಿವಂಭೂಯಾತ್ ||



॥ ಶ್ರೀ ೧೦೦೮ ನಮಃ ಪಂಚಜಗದ್ಗುರುಭ್ಯಃ ॥



ಶ್ರೀ ಜಗದ್ಗುರು ಶಿವಾನಂದ ರಾಜೇಂದ್ರ ಶಿವಾಚಾರ್ಯ
ಮಹ ಸ್ವಾಮಿಗಳು ರಂಭಾಪುರಿ ಪೀಠ

ಈ ಗ್ರಂಥಕ್ಕೆ ಆಶೀರ್ವಾದ ಮಾಡಲಿ.

॥ ಶ್ರೀ ೧೦೦೮ ನಮಃ ಪಂಚ ಜಗದ್ಗುರುಭ್ಯಃ ॥

# ಮುನ್ನುಡಿ

ವಿಶ್ವಮಾನವರಿಗೆ ಧರ್ಮ ಅರ್ಥ ಕಾಮ ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳೇ ಮೋಕ್ಷ ಮಾರ್ಗಕ್ಕೆ ಸಾಧನೀಯಗಳಾಗಿವೆ. ಈ ನಾಲ್ಕು ಪುರುಷಾರ್ಥವಿಲ್ಲದವರ ಜನ್ಮವೇ ವ್ಯರ್ಥವಾಗಿದೆಯೆಂದು ಬಲವಾಗಿ ಬರೆಯಲು ಸಂದೇಹವಿಲ್ಲ ಫಲಾಪೇಕ್ಷೆ ಪಡೆಯುಳ್ಳವರು ಕಡೇದಾದ ಮೋಕ್ಷವನ್ನೇ ಬೇಡಬೇಕು. ಇತರ ಸಂಪತ್ತು ವಗ್ಯೆರೆ ಬೇಡಬಾರದು ಅಶಾಸ್ವಿತ-ವಾದ ಪಲಾಪೇಕ್ಷೆಯಿಂದ ‹ ಪ್ರಯೋಜನವೇನು. ಗುರುಗಳು ಯಾವಾಗಲೂ ಶಿಷ್ಯರಿಗೆ ಬೋಧವನ್ನು ಮಾಡಿ ಅಜ್ಞಾನವನ್ನು ಹೋಗಲಾಡಿಸಿ ಪಾರಮಾರ್ಥಿಕವಾದ ಜ್ಞಾನವನ್ನುಂಟು ಮಾಡುವವರೇ ನಿಜವಾದ ಶ್ರೋ-ತ್ರೀಯ ಬ್ರಹ್ಮನಿಷ್ಠ ಗುರುಗಳೆಂದು ಬಲವಾಗಿ ಹೇಳಬಹುದು ಸಮಾಜವನ್ನು ನಾವು ಮುಂದೆ ವರಿಸಬೇಕಾದರೆ ಒಂದು ಮಹತ್ವದ ಶಕ್ತಿ ಪ್ರಭಾವಬೇಕೆಂಬದು ನಿಜವಾಗಿದೆ. ಆದು ಹೇಗೆ ಒಂದು ತೇರು ಎಳಿಯಬೇಕಾದರೆ ಬಹು ಜನರು ಸೇರಿ ಎಳಿದರೆ ಸರಳವಾಗಿ ಸಾಗುತ್ತದೆ. ಜನಗಳು ಇಲ್ಲದೇ ಹೋದರೆ ತೇರು ಸಾಗುವದಿಲ್ಲ. ಅದರಂತೆ ಸಮಾಜ ಎಂಬ ತೇರು ಸಾಗಬೇಕಾದರೆ ಗುರುಗಳು ಶಿಷ್ಯರು ಬಹು ಜನರು ಪ್ರಯತ್ನಪೂರ್ವಕ ಕೆಲಸ ಮಾಡಿದರೆ ಸುಗಮವಾದ ವಾತಾವರಣ ಸಮಾಜದಲ್ಲಿ ಬೀರಲು ಸಂದೇಹವಿಲ್ಲ. ಆದಕಾರಣ ಲೋಕಕಲ್ಯಾಣಾರ್ಥವಾಗಿ ಜನಗಳು ಕಂಕಣ ಕಟ್ಟಬೇಕು. ಬಹು ದಿವಸಗಳಿಂದ ಮೂಲಿಗೆ ಬಿದ್ದ ಪಾತ್ರೆಯಂತೆ ಸಮಾಜ ಅಧರ್ಮಮಾರ್ಗದಲ್ಲಿ ಬಿದ್ದು ಹೋಗಿದೆ. ಮಲಿನವಾದ ಪಾತ್ರೆಯನ್ನು ಬೆಳಗಿದರೆ ಹೇಗೆ ಸ್ವಚ್ಛವಾಗುತ್ತದೆಯೋ ಅದರಂತೆ ಗುರುಗಳು ಸಂಚರಿಸಿ ಶಿಷ್ಯರನ್ನು ಬೋಧ ಶಕ್ತಿಯಿಂದ ಬೆಳಗಿದರೆ ಥಳಥಳ ಅನ್ನುವಂತೆ ಆಗುತ್ತಾರೆ. ರಾಜನೀತಿಯಲ್ಲಿ ಧರ್ಮ ನೀತಿಯಲ್ಲಿ ನಂಬಿಗೆ ಮುಖ್ಯಬೇಕು. ಇದು ಇಲ್ಲದೆ ಹೋದರೆ ಅಧೋಗತಿಗೆ ಹೋಗಲಿಕ್ಕೆ ಕಾರಣವಾಗುವದು. ಇನ್ನಾದರೂ ಸಕಲ ಧರ್ಮದವರು ಸಮಾಜ

ಕಾರ್ಯಗಳಲ್ಲಿ ದಯಾಪರರಾಗಿ ಭಕ್ತಿಪ್ರೇಮಾದಿಗಳಿಂದ ನೆಡೆದನು, ಅದರಿ ಈ ಭವ ಸಮುದ್ರವನ್ನು ದಾಟಲಿಕ್ಕೆ ಸಕಲಜೀವಿಗಳಿಗೆ ಜಪತಪ, ದಾನ-ಧರ್ಮ, ರಾಜಯೋಗ, ಹಠಯೋಗ, ಲಯಯೋಗ, ಮಂತ್ರಯೋಗ ಜ್ಞಾನದ ವಾಕ್ಯಗಳನ್ನು ಸೇತುವೆಯನ್ನಾಗಿ ನಿರ್ಮಿಸಿ ಮಾರ್ಗವನ್ನು ಮಾಡಿ ರುವರು ಆ ಮಾರ್ಗವು ಪ್ರಪಂಚದಿಂದ ಮುಕ್ತಿಮಾರ್ಗ ಹೊಂದುವವರಿ-ಗಾಗಲೀ ಅವರವರಿಗೆ ಸರಿಯಾಗಿ ಭವಸಮುದ್ರವನ್ನು ದಾಟಲಿಕ್ಕೆ ಅನು-ಕೂಲವಾಗಿರುವದು. ಭಕ್ತರ ಪುಣ್ಯ ತೀರಲು ತಮ್ಮ ಮೂಲ ಸ್ವರೂಪ-ದಲ್ಲಿಯೇ ಸೇರಿಕೊಳ್ಳುವರು ಅವರಲ್ಲಿ ಹುಟ್ಟಿದ ವಸ್ತುಗಳು ನಿದ್ರೆಯಿಂದ ಎಚ್ಚರವಾದ ಕೂಡಲೇ ಕನಸಿನ ವಸ್ತುಗಳು ನಾಶವಾಗುವಂತೆ ಮಾಯವಾ ಗುವವು. ಆಗ್ಗೆ ಬ್ರಹ್ಮನಾಗಲಿಕ್ಕೆ ಸಂದೇಹವಿಲ್ಲ. ಸದ್ಗುರುಗಳ ಪಾದಗಳು ಮೊದಲು ಅನಂತ ಕ್ಷೇತ್ರ ಯಾತ್ರೆಗಳನ್ನು ಮಾಡಿ ಗುರುವಿದ್ದ ಸ್ಥಳಕ್ಕೆ ಓಡಾಡಿ ನಿತ್ಯ ಅವರ ಪಾದ ಪೂಜಿಸಿ ಪಾದೋದಕವನ್ನು ಸೇವಿಸಲು ಕ್ಷೇತ್ರ ಯಾತ್ರೆ ಗುರು ಸ್ಥಲ ಪಾದೋದಕದ ಮಹಿವೆ ಗಳು. ಸೂಜಿಯು ಸೂಜಿಯ ಕಲ್ಲಿಗೆ ಅಂಟಿಕೊಂಡಂತೆ ಸದ್ಗುರುಗಳ ಪಾದಗಳಲ್ಲಿ ಅಂಟಿಕೊಂಡು ಬ್ರಹ್ಮ ಸ್ಥಾನಕ್ಕೇರಿ ಅರುವಿನಲ್ಲಿ ಮೂಡಿ ಭಕ್ತರಿಗೆ ಬೋಧ ಮಾಡಿ ಹೇಳುವಂತ ಜ್ಞಾನ ಮಾರ್ಗದ ಗುರುಗಳಿಂದಲೇ ಭಕ್ತರಿಗೆ ಮುಕ್ತಿಮಾರ್ಗ ಲಭಿಸುವದು. ಸಜ್ಜನರಾಗಲಿ ದುಷ್ಟರಾಗಲಿ ಮುಕ್ತಿ ಬೇಕಾದರೆ ಗುರುವಿನ ಬಳಿಗೆ ಹೋಗಿ ಮಹಾ ಗುರುಗಳಿಗೆ ತನುಮನಧನವನ್ನರ್ಪಿಸಿದರೆ ಸಮುದ್ರವು ಹೊಳೆಹಳ್ಳ-ಗಳಿಂದ ದೂಷಿಸದೆ ಹಿಂದಕ್ಕೆ ಮಾಡದೆ ತನ್ನೊಳಗೆ ಐಕ್ಯ ಮಾಡಿಕೊಳ್ಳುವಂತೆ ಗುರುಗಳಾದರೂ ಶಿಷ್ಯರನ್ನು ನಿರಾಕರಿಸದೆ ತನ್ನೊಳಗೆ ಐಕ್ಯ ಮಾಡಿಕೊಂಡು ಮುಕ್ತರನ್ನು ಮಾಡುವನು. ಜನರು ಪುಣ್ಯವಾದ ಕಾರ್ಯಗಳ ಕಡೆಗೆ ಮನಸ್ಸು ಮಾಡಿದರೆ ಮನಸ್ಸು ಪುಣ್ಯದ ಬೇರು ಬಿಟ್ಟು ಕೈಲಾಸಕ್ಕೆ ಹಚ್ಚು ತ್ತದೆ. ನಮ್ಮ ಮನಸ್ಸನ್ನು ಯಾವಾಗಲೂ ಗುರು ಸೇವೆಯಲ್ಲಿ ಹಚ್ಚಿದರೆ ಅವರಿಗೆ ಗುರುಕೃಪೆ ಸಂಪೂರ್ಣವಾಗುವದು. ಭವ-ಬಂಧನ ದೂರವಾಗ-ಲಿಕ್ಕೆ ಮಾರ್ಕಂಡೇಶ್ವರನ ಉದಾಹರಣೆ ಒಂದೇ ಸಾಕು, ಮನಸ್ಸಿಗೆ ಮಾತ್ರ ತಳವೂ ಇಲ್ಲ. ತುದಿಯೂ ಇಲ್ಲ. ತನ್ನಷ್ಟಕ್ಕೆ ತಾನೇ ಅನೇಕ ಕೆಲಸ ಮಾಡುವದು ಜನರು ಯಾವ ಕಡಿಗೆ ಹಚ್ಚುವರೋ ಆ ಕಡಿಗೆ ಹೋಗು-

ವದು. ಈ ಚಂಚಲ ಮನಸ್ಸಿಗೆ ಗುರೂಪದೇಶವಾದರೆ ಮಾತ್ರ ಜನರ ಕಲ್ಪನೆ ಯಿಂದ ಹಾಲು ರೂಪಾಂತರವಾಗಿ ಕಡೆಗೆ ತುಪ್ಪವಾದಂತೆ ಗುರೂಪದೇಶ. ದಿಂದ ಮನಸ್ಸು ರೂಪಾಂತರವಾಗಿ ಗುರುಧ್ಯಾನದಿಂದ ತಾನೇ ಕಾಮಧೇನು ಚಿಂತಾಮಣಿಯಂತೆ ಆಗುವದು. ಆಮೇಲೆ ಮನಸ್ಸು ಸುಟ್ಟ ಕೊಡಗಳಂತೆ ನಿರ್ಮಲವಾಗುವದು. ಬೀಜದೊಳಗೆ ಮರವು ಅಡಗಿದಂತೆ ಮಹಗುರುಗಳಲ್ಲಿ ಮೋಕ್ಷ ಕೊಡುವ ಶಕ್ತಿ ಯಾವಾಗಲೂ ಇರುವದು ಕನ್ನಡಿಯ ಎದುರಿಗೆ ನಿಂತರೆ ನಿಮ್ಮ ಬಿಂಬವು ಕನ್ನಡಿಯಲ್ಲಿ ಮೂಡಿ ನಿಮಗೆ ತೋರುವಂತೆ ಮಹಾಗುರುವಿನಲ್ಲಿ ವಡನಾಡಿದ ಭಕ್ತನಿಗೆ ಗುರುವು ತನ್ನ ಪ್ರಕಾಶವನ್ನು ತೋರಿಸುವನು. ॥ ಗಂಗಾ ಪಾಪಂ ಶಶೀತಾಪಂ । ದೈನ್ಯಂ ಕಲ್ಪತರುಸ್ಥಥಾ। ಪಾಪಂ ತಾಪಂಚ ದೈನ್ಯಂಚ । ಗ್ರಂಥಿ ಸಂತೋ ಮಹಾಶಯಃ । ಇದರ ಅರ್ಥ ಗಂಗೆಯು ಪಾಪವನ್ನು ಕಳೆಯುತ್ತಾಳೆ. ಚಂದ್ರನು ತಾಪವನ್ನು ಕಳೆ ಯುತ್ತಾನೆ. ಕಲ್ಪವೃಕ್ಷವು ಬಡತನವನ್ನು ಹೋಗಲಾಡಿಸುತ್ತದೆ. ಪೂಜ್ಯ ಗುರುಗಳಾದ ಮಹತ್ಮರು ಮೂರನ್ನು ಕಳೆಯುತ್ತಾರೆ. ಪಾಪ-ತಾಪ-ಬಡ ತನ ಕಳೆದು ಆಶೀರ್ವಾದ ಮಾಡುತ್ತಾರೆ ಹಿಂದಕ್ಕೆ ನೀವೆಲ್ಲರು ಗುರುಕೃಪೆ ಶಿವನಕೃಪೆಯಿಂದ ಅನೇಕ ಜನ್ಮಗಳನ್ನು ತಿರುಗಿ ಪವಿತ್ರವಾದ ಮನುಷ್ಯ ಜನ್ಮವನ್ನು ತೊಟ್ಟುಕೊಂಡು ಬಂದಿರುವಿರಿ ಇಂತಹ ಜನ್ಮ ಬಂದ ಬಳಿಕ ನಿರರ್ಥಕವಾಗಿ ಸುಮ್ಮನೇ ಕಲಕಳೆಯಬಾರದು ದಿವಸಗಳು ಗತಿಸಿಹೋದ ಬಳಿಕ ಮರಣ ಪ್ರಾಪ್ತಿಯೇವದಗುವದು ಶೀಘ್ರವಾಗಿ ಗುರುವಿನ ಪಾದಸೇವನೆ ಅರ್ಚನ ವಂದನೆಗಳನ್ನು ಮಾಡಿದರೆ ಶಿವಸ್ವರೂಪನಾದ ಗುರುನಾಥನು ಆನಂದ ಉಳ್ಳವನಾಗಿ ನಮ್ಮೆಲ್ಲರ ಭಕ್ತಿಯನ್ನು ಸ್ವೀಕರಿಸಿ ಕರುಣಾಕರ ಎಂಬ ಬಿರುದವನು ಪಡೆದ ಕಾರಣ ಯಾವಾಗಲೂ ರಕ್ಷಣೆ ಮಾಡುವದರಲ್ಲಿ ಸಂದೇಹವಿಲ್ಲ. ಗುರು ಸೇವೆಯಲ್ಲಿ ಎಲ್ಲರೂ ದಾಸ್ಯ ಭಕ್ತಿಯನ್ನೇ ತೋರಿಸುತ್ತ ವಿಲಾಸದಿಂದಲೂ ಬಹು ಸಂತೋಷದಿಂದಲೂ ಪೂಜೆಯನ್ನು ಮಾಡಿ ಅಧಿಕ ವಾದ ಫಲಪಡೆಯಬೇಕು. ಕೆಲವರಿಗೆ ಹುಣ್ಣಿವೆ ಅಮಾವಾಸ್ಯಗಳಲ್ಲಿ ಪೂಜೆ ಯನ್ನು ಮಾಡಿರೆಂದು ಹೇಳಿದರೆ ಎಂದೂ ಮಾಡುವದಿಲ್ಲ ಸ್ನಾನ ಸಹಿತ ಮಾಡಿರುವದಿಲ್ಲ. ಈ ತರಹ ಪೂಜೆಯಿಂದ ಯಾವ ಫಲವೂ ಸಿಗಲಾರದು ಗುರುಗಳ ದೇವರ ಪೂಜೆಗೆ ಅಹಂಕಾರವೆಂಬ ಮೊಳಿಕೆ ಮೂಡಕೂಡದು

ಒಂದು ಪಕ್ಷದಲ್ಲಿ ಮೂಡಿದರೆ ಅದನ್ನು ಬೇಗನೇ ಮುರಿದು ಹಾಕಬೇಕು. ಕಿಂಕರ ಭಾವದಿಂದಲೇ ಶಂಕರನಾದ ಗುರುವನ್ನು ಸೇವಿಸಬೇಕು. ದಾಸ್ಯ ವೃತ್ತಿಯಿಂದ ಸೇವೆಗೈಯ್ಯಬೇಕು. ಪೂಜೆ ಮಾಡಿದ್ದೆ ಮನುಷ್ಯ ಜನ್ಮದ ಹೆಗ್ಗುರುತ ಅಸ್ತು ‖ ಪರೋಪಕಾರಾರ್ಥ ಮಿದಂ ಶರೀರ ಎಂಬಂತೆ ಪರೋಪ ಕಾರ ಮಾನವರು ಮಾಡದೇ ಇದ್ದರೆ ಕಟಗಿ ಡಂಬು ಬಿದರು ಕಲ್ಲು ಹೊಳೆ ಹಳ್ಳ ಸಮುದ್ರಗಳು ಪಶುಗಳು ಸಹಿತ ಪರೋಪಕಾರ ಯಾವಾಗಲೂ ಮಾಡು ವವು. ಇವುಗಳಿಗಿಂತ ಪರೋಪಕಾರವಿಲ್ಲದವರು ಕನಿಷ್ಟ ವರ್ಗದವರಲ್ಲಿ ಪರಿಗಣಿಸಲ್ಪಟ್ಟಿದ್ದಾರೆ. ಧನಿಕರಾದವರು ತಾವು ಗಳಿಸಿದ ದ್ರವ್ಯವನ್ನು ಧರ್ಮಕಾರ್ಯಕ್ಕೆ ದಾನಮಾಡಬೇಕು. ಪವಿತ್ರವಾದ ಕಾರ್ಯಕ್ಕೆ ಸಲ್ಲುವದ ರಿಂದ ಬಹು ಕೀರ್ತಿ ಪಡೆಯುವದಲ್ಲದೆ ಬಹು ಪುಣ್ಯವೂ ಪ್ರಾಪ್ತವಾಗುವದು. ಇದರಿಂದಲೇ ಮಾನವರ ಸೊಗಸು ಸಂಪತ್ತು ಪ್ರಾಪ್ತಗಳಾಗುತ್ತವೆ. ಇದೇ ವಿಷಯವಾಗಿ ವಚನವೂ ಕೂಡ ಹೇಳುವದು ಕೇಳಿರಿ ‖ ಧರ್ಮ ಅರ್ಥ ಕಾಮ ಮೋಕ್ಷ ಈ ನಾಲ್ಕು ಪುರುಷಾರ್ಥಗಳಿಂದಲೇ । ಶರೀರ ಜನ್ಮ ಪ್ರಾಪ್ತಿ ಎಂಬದನು ಮರೆಯಲಾಗದು । ಧರ್ಮದಿಂದಲೇ ಜನ್ಮ ಸಾಫಲ್ಯ- ವೋ । ಧರ್ಮದಿಂದಲೇ ಕರ್ಣನು ಹೆಸರುವಾಸಿಯಾದನು । ಧರ್ಮ ದಿಂದಲೇ ಆಯುಷ್ಯ ಕೀರ್ತಿ ಲತೆಯು । ಧರ್ಮದಿಂದಲೇ ಮೋಕ್ಷ ಲಕ್ಷ್ಮಿ ಯು ಕರಗತವಾಗುವಳು । ಅಧರ್ಮವೇ ನರಕ ಯಾತನೆ ಹೊಂದಿಸಿ । ಕಷ್ಟನಷ್ಟಗಳಿಗೆ ಗುರಿ ಮಾಡುವದೆಂದ । ಚಿಕ್ಕಮಣ್ಣೂರ ಗುರು ರೇಣುಕ ದೇವ ‖ ನಮ್ಮಗಳ ದಯಾ ಧರ್ಮಗುಣಗಳಿಂದಲೇ ಗುರು ಶಿವನ ದೇಣಿಗೆ ಉಂಟಾಗುವವು. ಇಂತಹ ಪವಿತ್ರ ಕಾರ್ಯಗಳಿಗೇ ಶರಣು ಹೊಡೆದು ಅಧಿ ಕಾರದ ಮದ ಜನಗಳಲ್ಲಿ ನಮ್ಮದೇ ನಡೆಯುತ್ತದೆಂದು ದರ್ಪು ಡೌಲು ತೋರಿಸಿ ನಡೆದದ್ದಾದರೆ ಬಹು ದಿವಸಗಳವರೆಗೆ ಪರಿಗಾಣಿಸದೆ ನಡೆಯ, ಲಾರವು ಇಂತವರಿಗೆ ಮುಂದೆ ಕುತ್ತುಗಳೇ ಬೇಗ ಬೇಗನೆ ಬರುವವು. ಆದ ಕಾರಣ ಸಮಸ್ತರು ಧರ್ಮ ಕ್ಷೇತ್ರ ಚೆನ್ನಾಗಿಟ್ಟುಕೊಂಡು ಸ್ವಧರ್ಮದಲ್ಲಿ ನಂಬಿಗೆ ಪರಧರ್ಮಗಳಲ್ಲಿ ಸಹನತೆ ರಾಷ್ಟ್ರ ಧರ್ಮ ಕಾರ್ಯಗಳೇ ಕೈಲಾಸ ಕಾರ್ಯವೆಂದು ಭಾವಿಸಬೇಕೆಂಬುದೇ ಶ್ರೀ ೧೦೦೦೮ ಜಗದ್ಗುರು ಸಾರ್ವ ಭೌಮ ರೇಣುಕಾಚಾರ್ಯ ಸಿದ್ಧಾಂತ ಶಿಖಾಮಣಿಯಲ್ಲಿ ಈ ರೀತಿ ಯಾಗಿ ಅಪ್ಪಣೆ ಮಾಡಿರುವರು ಕೇಳಿರಿ.

ಅಹಿಂಸಾ ಸತ್ಯಮಸ್ತೇಯಂ । ಬ್ರಹ್ಮಚರ್ಯಂ ದಯಾಕ್ಷಮಾ ।
ದಾನಂ ಪೂಜಾ ಜಪೋಧ್ಯಾನ । ಮಿತಿ ಧರ್ಮಸ್ಯ ಸಂಗ್ರಹಃ ॥

ಇದರ ಅರ್ಥ— ಪ್ರಾಣಿಗಳ ಹಿಂಸೆ ಮಾಡಬೇಡ ಪರರ ಒಡವೆಗಳನ್ನು ಧನವನ್ನು ಕದಿಯಬಾರದು । ಸತ್ಯವಾಗಿ ಮಾತನಾಡು ಬ್ರಹ್ಮಚರ್ಯ ದಯೆ ಕ್ಷಮೆ ಇವೇ ಧರ್ಮಸಂಗ್ರಹವೆಂದು ತಿಳಿಯಬೇಕು.

ಧರ್ಮವು ಇಡೀ ವಿಶ್ವ ಪ್ರಪಂಚಕ್ಕೆ ಆಧಾರ ಸ್ತಂಭವಾಗಿರುವದು.

ಧರ್ಮದಿಂದಲೇ ಪ್ರಪಂಚವು ಬಾಳುತ್ತ ಬದುಕುತ್ತ ನಡೆದಿರುವದು. ವೃಕ್ಷಗಳ ಬೇರು ಸಡಲಿದರೆ ಗಿಡವು ಬಹು ದಿವಸ ನಿಾದ್ರಲಾರಡು ಹಾಗೆ ಧರ್ಮವು ಸಿಥಿಲವಾದರೆ ನಮಗೇ ಅಳಿಗಾಲ ಬಂತೆಂದು ತಿಳಿಯಬೇಕು ಇಂತಹ ದುರ್ಗಟ ಪ್ರಸಂಗ ತಂದುಕೊಳ್ಳನೆ ಧರ್ಮ ರೀತಿಯಿಂದ ನಡೆದು ಗರುಶಿವನ ಕೃಪೆಗೆ ಪಾತ್ರರಾಗಬೇಕು. ಮಹಾನಂದಿ ಕ್ಷೇತ್ರದ ಚರಿತ್ರದ ವುುನ್ನು ಬರದಿದ್ದೇವೆ ಸಮಸ್ತ ಧರ್ಮದವರು ಭಕ್ತಿಯಿಂದ ಓದಿಕೊಂಡು ನಡೆ ನುಡಿ ಶುದ್ಧ ಭಾವನೆ ಇಟ್ಟುಕೊಂಡು ಹೋಗಿರೆಂದು ಈ ಮುನ್ನ್ನುಡಿಗೆ ವಿರಾಮ ಕೊಡುತ್ತೇವೆ.

॥ ಇತಿ ಶಿವಂಭೂಯಾತ್ ॥



## ಭಾರತ ಮಹಾಶಯರೇ,

ಅನೇಕ ಜನ ಯಾತ್ರಿಕರು ಮಹಾನಂದಿ ಎಂಬ ಹೆಸರು ಈ ಕ್ಷೇತ್ರಕ್ಕೆ ಹ್ಯಾಗೆ ಬಂದಿತೆಂದು ಕೇಳುತ್ತಿರುವರು. ಸಂಕ್ಷೇಪವಾಗಿ ಈ ಕ್ಷೇತ್ರದ ಸಮಾಚಾರ ಬರದಿದ್ದೇವೆ. ಓದಿಕೊಂಡು ನಿಜವಾದ ತತ್ವ ತಿಳಿದುಕೊಂಡು ಧನ್ಯರಾಗಬೇಕು. ಈ ನಾಡಿನಲ್ಲಿ ಹಿಂದಕ್ಕೆ ಮಹಾ ವೈರಾಗ್ಯಶಾಲಿಯಾದ ಸಿಲಾದ ಮಹಾ ಋಷಿಯು ಈ ಪ್ರದೇಶದಲ್ಲಿ ಆಗಮಿಸುವ ಜನರಿಗೆ ಹಾಗೂ ಪಶು ಪ್ರಾಣಿಗಳಿಗೆ ಕುಡಿಯಲಿಕ್ಕೆ ನೀರಿನ ಪ್ರವಾಹವಿಲ್ಲ ಮಹಾ ಪ್ರವಾಹದ ಜಲವು ಬರುವಂತೆ ಶಿವನ ಕಡೆಯಿಂದ ವರ ಪ್ರಧಾನ ಪಡೆಯಬೈಕೆಂದು ಅನಿಲಾಹರದಿಂದ ತಪಸ್ಸನ್ನು ಮಾಡಿದನು. ಒಂದು ದಿವಸ ಇವರ ತಪಸ್ಸಿಗೆ ವಿಘ್ನ ತಂದು ಈ ಸ್ಥಾನದಿಂದ ದೂರ ಹೋಗುವಂತೆ ಮಾಡಬೇಕೆಂದು ಸಾಮಾನ್ಯ ಮನುಷ್ಯ ರೂಪದಿಂದ ಪರಮೇಶ್ವರನೇ ಆಗಮಿಸಿ ಋಷಿಯನ್ನು ಕಂಡು ಎಲೋ ಋಷಿಯೇ ನೀನು ಈ ಸ್ಥಾನದಲ್ಲಿ ತಪಸ್ಸನ್ನು ಖಂಡಿತ ಮಾಡಬೇಡ ಬೇರೆ ಕಡಿಗೆ ಹೋಗು ಇಲ್ಲಿ ಕೂಡ್ರಲೂಬೇಡವೆಂದು ಹೇಳಿ ಮುಂದೆ ಹೋಗಿ ಮಾಯವಾದನು ಆದರೂ ಶಿವನು ವರಿಗಲ್ಲು ಹಚ್ಚಿ ನೋಡುತ್ತಾನೆಂದು ಆಲೋಚನ ಮಾಡಿ ಎಲ್ಲಿಯೂ ತೆರಳದೇ ಅದೇ ಸ್ಥಾನದಲ್ಲಿ ಒಳ್ಳೇ ನೈಷ್ಠಿಕ ಭಾವದಿಂದ ಘೋರವಾದ ತಪಶ್ಚರ್ಯ ಮಾಡಲು ಪರಶಿವನು ಇವನ ಸತ್ವ ಪರೀಕ್ಷೆ ಮಾಡಬೇಕೆಂದು ಶಿಲಾದ ಮಹ ಋಷಿಯ ಗರ್ಭದಲ್ಲಿ ಬೆಂಕಿಯ ಜ್ವಾಲೆ ಧಗಧಗ ಉರಿಯುವಂತೆ ಮಾಡಿದನು ಈ ರೀತಿ ಮಾಡಿದರೆ ಬೆಂಕಿಯ ಬಾಧೆ ತಡೆಯದೇ ಓಡಿ ಹೋಗುತ್ತಾನೆಂದು ಮಾಡಲು ಅವನು ಏನು ವಿಘ್ನ ಮಾಡಿದರೂ ಸಹನ ಮಾಡಿಕೊಂಡು ತನ್ನ ವ್ರತ ನೇಮನ್ನು ಬಿಡದಂತೆ ತಪಶ್ಚರ್ಯ ಮಾಡಲು ಶ್ರೀ ಪರಮೇಶ್ವರನ ಪಂಚ ಮುಖಗಳಲ್ಲಿ ಐದು ಗೋವುಗಳು ಹುಟ್ಟಿರುವವು. ಅವುಗಳಲ್ಲಿ ನಂದಿ ಎಂಬ ಗೋ ಕೈಲಾಸದಿಂದ ಈ ಮಹಾಋಷೀಶ್ವನಲ್ಲಿ ಬಂದು ಹಾಲನ್ನು ಕರೆಯಲು ಆ ಪವಿತ್ರ ಹಾಲನ್ನು ಮಹಾ ಋಷಿಯು ಪಾನ ಮಾಡಲು ಹೃದಯದಲ್ಲಿ ಉರಿಯುವ ಬೆಂಕಿ ಪ್ರಶಾಂತವಾಗಹತ್ತಿತು. ನಿತ್ಯ ಅಪೇಕ್ಷೆ ಮಾಡಿದಾಗೆಲ್ಲ ಮಹಾನಂದಿಯು ಹಾಲನ್ನು ಕರೆಯ ಹತ್ತಲು ಪರಶಿವನು ಇವನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾದನು. ಆಗ್ಗೆ ಶಿಲಾದ ಮಹಾ ಋಷಿಯು ಪರಶಿವನ

ದರ್ಶನ ಮಾಡಿಕೊಂಡು ದೀರ್ಘದಂಡ ನಮಸ್ಕಾರ ಮಾಡಿ ನಿಂತುಕೊಂಡನು ಪರಮೇಶ್ವರನು ಎಲೋ ಋಷಿಯೇ ನೀನು ತಪಸ್ಸು ಮಾಡಿದ ಕಾರಣವೇನು ನಿನಗೆ ಯಾವ ಫಲ ಬೇಕು. ಕೇಳಿಕೋ ನಿನ್ನ ಸಂಕಲ್ಪವನ್ನು ಪೂರೈಸುತ್ತೇನೆಂದು ಹೇಳಲು ಪರೋಪಕಾರವೇ ಮುಖ್ಯವಾದದ್ದು. ಇದರಲ್ಲಿ ನನ್ನ ಸ್ವಾರ್ಥ ಯಾವದೂ ಇರುವದಿಲ್ಲ. ಈ ಪ್ರದೇಶದಲ್ಲಿ ಮಾನವರಿಗೆ ಕುಡಿಯಲಿಕ್ಕೆ ನೀರು ಸಹಿತವಿಲ್ಲಾ ದಯಾಮಯನಾದ ನೀನು ಇಲ್ಲಿ ನೀರಿನ ಪ್ರವಾಹ ಆಗಬೇಕು. ನಿನ್ನ ಚಿತ್ಕಲೆ ಇಲ್ಲಿ ಉದಯವಾಗಿ ಶಿತಲಿಂಗ ಮೂರ್ತಿ ಕಂಗೊಳಿಸಿ ನನಗೆ ಹಾಲನ್ನು ದಯಪಾಲಿಸಿದ ಮಹಾನಂದಿಯೆಂಬ ಕ್ಷೇತ್ರವಾಗಬೇಕೆಂದು ಕೇಳಿಕೊಳ್ಳಲು ಅಭಯವನ್ನು ಕೊಟ್ಟುಮಾಯವಾದನು ಆ ಸಮಯದಲ್ಲಿಯೇ ಅದೇ ಸ್ಥಾನದಲ್ಲಿ ಒಂದೇ ಗೇಣು ಭೂಮಿಯನ್ನು ಅಗಿಯಲು ಮಹಾಜಲವು ಉದಯವಾಯಿತು. ಅಲ್ಲಿಯೇ ಒಂದು ಶಿಲಾ ಇತ್ತು ಅದೇ ಶಿಲೆಯನ್ನು ತಂದು ಈಶ್ವರ ಮೂರ್ತಿಯನ್ನು ಮಹಾದೇವಿಯನ್ನು ಶಿಲ್ಪಿಯವರನ್ನು ಕರೆಯಿಸಿ ಎರಡೂ ಮೂರ್ತಿಗಳನ್ನು ಹೊಡೆಯಿಸಿದ ನಂತರ ಈ ಮೂರ್ತಿಗಳಿಗೆ ವೈದಿಕ ರೀತಿಯಿಂದ ಪೂಜೆಯನ್ನು ಮಾಡಿ ಪ್ರಾಣ ಪ್ರತಿಷ್ಠೆಯನ್ನು ಮಾಡಿ ಸ್ಥಾಪನೆ ಮಾಡಲು ಅಂದಿನಿಂದ ಮಹಾನಂದಿ ಕ್ಷೇತ್ರವೆಂಬ ಹೆಸರು ಪ್ರಸಿದ್ಧವಾಯಿತು. ಆ ಶಿವಲಿಂಗದ ಕೆಳಗೇ ಮಹಾ ಜಲವು ಹರಿಯುತ್ತ ಮಹಾನಂದಿ ಮುಖದಿಂದ ಜಲವು ಕೊಂಡಗಳಲ್ಲಿ ಹರಿಯುತ್ತಿರುವದು. ಭಾವಿಕರಾದ ಭಕ್ತ ಸ್ತ್ರೀ-ಪುರುಷರು ತೀರ್ಥವಾಗಿ ಭಾವಿಸಿ ಸ್ನಾನ ಮಾಡಿ ತಮ್ಮ ಪಾಪವನ್ನು ಕಳೆದುಕೊಂಡು ಪವಿತ್ರ ಆತ್ಮವುಳ್ಳವರಾಗಿ ಪಾನ ಮಾಡಿ ಧನ್ಯರಾಗುತ್ತಿರುವರು. ನಂದ್ಯಾಲ ಗ್ರಾಮದ ಮಹಾರಾಜನು ಈ ಕ್ಷೇತ್ರದ ಮಹಿಮಾತಿಶಯಗಳನ್ನು ನೋಡಿ ಸುಂದರವಾಗಿ ಈ ಕ್ಷೇತ್ರ ಕಲ್ಲಿನಿಂದಲೇ ದೇವಸ್ಥಾನ ಕಟ್ಟಿಸಿರುವನು. ಈ ದೇವಸ್ಥಾನಕ್ಕೆ ೭೫ ಎಕರೇ ಭೂಮಿ ಇರುವದು. ಈ ನೀರಿನ ಝುರಿಯಿಂದಲೇ ತೋಟಪಟ್ಟಿಗಳು ಆಗಿರುವವು. ಈ ಕ್ಷೇತ್ರ ಕೂಡ ಆಂಧ್ರ ಪ್ರಾಂತದ ಯಂಡೋಮೆಂಟ ಆಫೀಸಿನವರ ಸಹಾಯದಿಂದ ನಡೆದಿರುವದು ಒಳ್ಳೇ ಶ್ಲಾಘನೀಯವಾದದ್ದು ಇಂತಹ ಪವಿತ್ರವಾದ ಮಹಾ ನಂದಿಯನ್ನು ಹಾಗೂ ಶಿವಲಿಂಗಗಳು ವೀರಭದ್ರೇಶ್ವರ, ಷಣ್ಮುಖಸ್ವಾಮಿ, ಆಂಜನೇಯ, ದತ್ತಾತ್ರೇಯ,

ಶ್ರೀ ರಾಮಚಂದ್ರ-ಲಕ್ಷ್ಮಣ-ಸೀತಾದೇವಿ ಮೊದಲಾದರ ಸಂದರ್ಶನ ಮಾಡಿಕೊಂಡು ಯಾತ್ರಿಕರು ಈ ಮೂರ್ತಿಗಳಿಗೆ ಶ್ರೀ ರುದ್ರಾಭಿಷೇಕ ಮೊದಲಾದ ಪೂಜೆಯನ್ನು ಮಾಡಿಸಿ ಫಲ ಕರ್ಪುರ ಮಂಗಲ ಮಾಡಿಸಿ ಆಶೀರ್ವಾದವಂ ಪಡೆದುಕೊಂಡು ತಮ್ಮ ಇಷ್ಟ ಪ್ರಕಾರ ಕಾಮಧೇನು ಕಲ್ಪವೃಕ್ಷ ವರಚಿಂತಾಮಣಿಯಂತೆ ಬೇಡಿದ ಫಲಕೊಡುವ ಮಹಾ ಕ್ಷೇತ್ರ ಅನೇಕ ಫಲವನ್ನು ಒದಗಿಸಿಕೊಂಡು ತಮ್ಮ ಸಂಕಲ್ಪ ಪೂರೈಸಿಕೊಂಡು ಹೋಗುತ್ತಾರೆ. ಮಹಶಯರೇ ಮಹಾತ್ಮ ಶಿಲಾದ ಮಹಋಷಿಗಳು ತಪಶ್ಚರ್ಯ ಮಾಡಿ ಸರ್ವೇಶ್ವರನಾದ ಪರಮಾತ್ಮನನ್ನು ವಲಿಸಿಕೊಂಡು ದೀರ್ಘ ಪ್ರಯತ್ನವನ್ನು ಮಾಡಿ ತನ್ನ ದೇಹ ಧಗಧಗ ಉರಿದರೂ ಸಹನ ಮಾಡಿಕೊಂಡು ತನ್ನ ನೈಷ್ಠಿಕವಾದ ಸಂಕಲ್ಪದಂತೆ ಮಹಾ ಕ್ಷೇತ ಮಾಡಿ ಹೋದ ಕೀರ್ತಿ ಯಾವಾಗಲೂ ಸ್ಥಿರಸ್ಥಾಯಿಯಾಗಿ ಉಳಿದು ಬರುವ ಯಾತ್ರದ ಜನರಿಗೆ ಫಲಕಾರ ಆಯಿತೆಂದು ತಿಳಿಸಿ ಈ ಚರಿತ್ರಕ್ಕೆ ವಿರಾಮ ಕೊಡುತ್ತೇವೆ.

ಧರ್ಮಕ್ಕಾಗಿ ಏಳಿರಿ. ಧರ್ಮಕ್ಕಾಗಿ ಆಳಿರಿ.
ಧರ್ಮಕ್ಕಾಗಿ ಬಾಳಿರಿ. ಧರ್ಮಕ್ಕಾಗಿ ತಾಳಿರಿ.

॥ ಇತಿ ಶಿವಂಭೂಯಾತ್ ॥



॥ ಶ್ರೀ ಚಿಕ್ಕಮಣ್ಣೂರ ಗುರು ಪೀಠದ ವರ್ಣನಮಃ ॥

॥ ಶ್ರೀ ೧೦೦೮ ಜಗದ್ಗುರು ಪಂಚಾಚಾರ್ಯೇಭ್ಯೋ ನಮಃ ॥

# ಶ್ರೀ ಪೂಜ್ಯ ಚಿಕ್ಕಮಣ್ಣೂರು ಮಹ ಸ್ವಾಮಿಗಳವರ ಗುರುಸಂಸ್ಥಾನ ಬೃಹನ್ಮಠದ ಪ್ರಾಚೀನತ್ವದ ಸಮಾಚಾರ.

## ಗ್ರಂಥಾರಂಭದಲ್ಲಿ ಮಂಗಲ ಶ್ಲೋಕಗಳು.

ಪಂಚಾನನತನೂದ್ಭೂತಾನ್ । ಪಂಚಾಕ್ಷರ ಮನೂಪಮಾನ್ ।
ಪಂಚಸೂತ್ರಕೃತೋವಂದೇ । ಪಂಚಾಚಾರ್ಯಾನ್ ಜಗದ್ಗುರೂನ್ ॥

ಮಿನಗುತಿಹ ಚಿಕ್ಕಮಣ್ಣೂ । ರಿನ ರೇವಣಸಿದ್ಧ ಪೂಜ್ಯ ಪಾದಗಣೇದ್ರಂ ।
ಬಿನದದಿ ಧರೆಯೊಳು ಚರಿಪಂ । ವಿನುತಾಚಾರ್ಯರ ಮಹತ್ವಗಳ ಬೋಧಿಸುತಂ ॥

ಮೆರೆಯುತಿಹ ಚಿಕ್ಕಮಣ್ಣೂ । ರ್ವುರ ರೇವಣ ಪೂಜ್ಯ ಪಾದಪಟ್ಟಗಣೇಂದ್ರಂ।
ಚರಿಸುತೆ ಭೂಮಂಡಲಮಂ । ಧರಿಸಿಹನಾಚಾರ್ಯ ತತ್ವ ಭೋಧಕ ನಾಮಂ ॥

ಭಾರತ ಮಹಾಶಯರೇ—

ಕತ್ತಲೆಯನ್ನು ಹೋಗಲಾಡಿಸುವದಕ್ಕೆ ಜ್ಯೋತಿಯು ಹೇಗೆ ಅವಶ್ಯವೋ ಅದರಂತೆ ದುಃಖವನ್ನು ಹೋಗಲಾಡಿಸುವದಕ್ಕೆ ಗುರುವು ಮತ್ತು ಗುರುಪೀಠವು ಅವಶ್ಯಕವಾಗಿರುತ್ತದೆ ಪರಶಿವನ ಆತ್ಮ ಜ್ಯೋತಿಯೇ ಗುರು ರೂಪಧಾರಿಯಾಗಿ ಪ್ರಪಂಚವನ್ನೆಲ್ಲ ಸುತ್ತುತ್ತ ಭಕ್ತರ ಕಷ್ಟಗಳನ್ನು ದೂರ ಮಾಡಿ ಶಿವಸಾಯುಜ್ಯವನ್ನು ದಯಪಾಲಿಸುತ್ತಿರುವನು ಅಂತೇ ಧಾರವಾಡ ಜಿಲ್ಲಾ–ರೋಣ ತಾಲೂಕ ಪೈಕಿ ಚಿಕ್ಕಮಣ್ಣೂರು ಶ್ರೀ ಗುರುಸಂಸ್ಥಾನ ಬೃಹನ್ಮಠವು ಪ್ರಾಚೀನ ಕಾಲದಿಂದ ಇದುವರೆಗೆ ಒಳ್ಳೇ ಗೌರವ ಸ್ಥಿತಿಯಲ್ಲಿದ್ದು ಈ ಗುರುಪೀಠವನ್ನು ಪೂಜ್ಯಪಾದರಾದ ಶ್ರೀ ಗುರು ಪಟ್ಟಾಧಿಕಾರಿಗಳ

ಆಳುತ್ತಲೇ ಬಂದಿರುವ ವಿಷಯ ಸಮಸ್ತರಿಗೇ ವೇದ್ಯವಾಗಿದ್ದರೂ ಸಲ್ಪು ಸಮಾಜಕ್ಕೆ ಜ್ಞಾಪಕಮಾಡಿಕೊಡುತ್ತೇವೆ. ಈ ಗುರು ಪೀಠಕ್ಕೆ ಗೌರ್ವ್ಮೆಂಟ ನವರು ಇನಾಮ ಭೂಮಿ ಕೊಟ್ಟಿರುವಲ್ಲದೆ ಭಕ್ತ ಮಾಹೇಶ್ವರರು ಶಿಷ್ಯರಿ-ದ್ದಾರೆ ಈ ಗುರು ಪೀಠವು ಶ್ರೀ ಜಗದ್ಗುರು ರಂಭಾಪುರಿ (ಬಾಳೆಹೊನ್ನೂರ) ಮಹಾ ಸಿಂಹಾಸನ ಶಾಖಾ ಮಠವಾಗಿದ್ದು ಪಡ್ವಿಡಿ ಸೂತ್ರ ವೀರಗೋತ್ರಕ್ಕೆ ಸೇರಿದ್ದಾಗಿದೆ. ಈ ಗುರು ಪೀಠದ ಇನಾಮ ಭೂಮಿಯಲ್ಲಿ ಪ್ರಾಚೀನ ಶ್ರೀ ಸೋಮನಾಥೇಶ್ವರ ನಾಮಕವಾದ ಶಿವಲಿಂಗ ಮೂರ್ತಿ ಕಂಗೊಳಿಸುತ್ತಿರು-ವದು. ಅನೇಕ ಗ್ರಾಮದ ಭಕ್ತರು ಬಹು ಭಕ್ತಿಯಿಂದ ನಡೆದುಕೊಂಡು ರೋಗ ಪೀಡೆಗಳನ್ನು ಕಳೆದುಕೊಳ್ಳುತ್ತ ಧನ್ಯರಾಗುತ್ತಿರುವರು. ಇವರ ಮಹತ್ವ ಬರೆಯಲು ಅಸದಳವೇ ಇರುವದು. ಹಿಂದಕ್ಕೆ ಈ ಗುರು ಪೀಠದ ಯತಿ-ಕುಲತಿಲಕ ಪೂಜ್ಯ ಮಹಸ್ವಾಮಿಗಳವರು ಅನೇಕ ಮಹತ್ವಗಳನ್ನು ಮಾಡಿ ಕೇವಲ ವಿದ್ವಾಂಸರಾಗಿ ಶಿಷ್ಯರಾದ ಭಕ್ತ ಮಾಹೇಶ್ವರರಿಗೆ ತಮ್ಮ ಅಮೋಘವಾದ ಅಮೃತವಾಣಿಯಿಂದ ಬೋಧ ಮಾಡಿ ಬಹು ಕೀರ್ತಿಯುತ ರಾಗಿ ಹೋಗಿದ್ದಾರೆ. ಇಂತಹ ಪೂಜ್ಯ ಪಾದಂಗಳವರ ಪವಿತ್ರ ನಾಮ-ದಿಂದಲೇ ಈ ಗುರು ಪೀಠವು ಪರಂಪರ್ಯವಾಗಿ ಶ್ರೀ ಗುರು ಪಟ್ಟಾಧಿಕಾರಿ ಗಳು ಆಳುತ್ತ ಬಂದಿರುವದೇ ಸಾಕ್ಷಿ ಭೂತವಾಗಿರುವದು. ನಮ್ಮೆಲ್ಲರಿಗೆ ಹೆಮ್ಮೆ ಎನಿಸದೆ ಇರಲಾರದು ॥ ಅಸ್ತು ॥ ವಿದ್ಯಾವಂತರೂ ಸದ್ಧರ್ಮ ಸದಾಚಾರಿ ಗಳೂ ಆದ ಶ್ರೀ ವೇ॥ ಅಡಿವೇಂದ್ರ ಸ್ವಾಮಿಯವರು ಬೃಹನ್ಮಠ ಚಿಕ್ಕ ಮಣ್ಣೂರ ಇವರ ಧರ್ಮಪತ್ನಿಯವರಾದ ಶ್ರೀ ಮಾತಾ ಗುರು ಸಿದ್ಧವ್ವ ನವರು ಇವರೀರ್ವರ ಪುಣ್ಯ ದಂಪತಿಗಳ ಗರ್ಭದಲ್ಲಿ ಜನಿಸಿ ಸಮಾಜದಲ್ಲಿ ವೈದಿಕ ಮತ್ತು ಲೌಕಿಕ ಕಾರ್ಯಗಳನ್ನು ಮಾಡಿ ಮಹಾ ಪ್ರಖ್ಯಾತಿಯನ್ನು ಪಡೆದ ಶ್ರೀ ಗುರು । ಬ್ರಹ್ಮೀ । ಪಂಡಿತ ಶ್ರೀ ರೇವಣಸಿದ್ಧ ಶಿವಾ-ಚಾರ್ಯ ಮಹಸ್ವಾಮಿಗಳವರ ಪಟ್ಟಾಧಿಕಾರ ಮಹೋತ್ಸವವು ದಿನಾಂಕ ೨೨—೧೧—೧೯೭೦ ನೇ ಇಸ್ವಿ ದಿವಸ ಮಹಾ ವಿಜ್ರಂಭಣೆಯಿಂದ ಶಾಸ್ತ್ರೋಕ್ತ ಪ್ರಕಾರ ಚಿಕ್ಕ ಮಣ್ಣೂರ ಗ್ರಾಮದಲ್ಲಿಯೇ ನಡೆದು ಅನ್ನ-ಸಂತರ್ಪಣೆ ನಡೆಯಿತು. ಸಾಯಂಕಾಲದಲ್ಲಿ ಊರ ಪ್ರಮುಖರು ಗ್ರಾಮದ ಬಜಾರವನ್ನು ತಳಿರು-ತೋರಣಗಳಿಂದ ಅಲಂಕಾರಗೊಳಿಸಿದ್ದರು. ಕಲಾದಗಿ

ಚಿಮ್ಮಲಗಿ ಶಿರೂರ ಬಾಗಲಕೋಟೆ ಮೊದಲಾದ ಗ್ರಾಮಗಳಿಂದ ಶ್ರೀ ಪೂಜ್ಯ ಶ್ರೀಗಳವರು ಮತ್ತು ವೈದಿಕ ಶಾಸ್ತ್ರಿಗಳವರು ಹಾಗೂ ಗುರು ಪೀಠದ ಶಿಷ್ಯರೂ ಕೂಡ ನಾನಾ ಭಾಗಗಳಿಂದ ಆಗಮಿಸಿದ್ದರು. ಕಲಾದಗಿ ಶ್ರೀಗಳವರಿಂದ ಅಧಿಕಾರ ಕೊಡಲ್ಪಟ್ಟನಂತರ ಸಕಲ ಬಿರುದಾವಳಿಗಳೊಡನೆ ನೂತನ ಅಧಿಕಾರಿಗಳವರ ಅಡ್ಡಪಲ್ಲಕ್ಕೀ ಮಹೋತ್ಸವ ನಡೆದು ಅನ್ನ ಸಂತರ್ಪಣೆಯೊಡನೆ ಕಾರ್ಯಕ್ರಮ ಮುಗಿದು ಹೋಯಿತು. ಆಮೇಲೆ ಧರ್ಮಶಾಸ್ತ್ರಗಳ ಅಧ್ಯಯನಕ್ಕಾಗಿ ಅಬ್ಬಿಗೇರಿ, ಬಾಗಲಕೊಟೆ, ಹೊಸಪೇಟೆ, ರಾಯಚೂರ ಬಳ್ಳಾರಿ ಮೊದಲಾದ ಸಂಸ್ಕೃತ ಪಾಠ ಶಾಲೆಗಳಲ್ಲಿ ಸಾಹಿತ್ಯ ಅಭ್ಯಾಸವನ್ನು ಮಾಡಿ ಶ್ರೀ ಕ್ಷೇತ್ರ **ಕಾಶೀ ಜಗದ್ಗುರು ವಿಶ್ವಾರಾಧ್ಯ ಮಹಾಪೀಠದಲ್ಲಿ** ಸೇರಿ ಅಲ್ಲಿಯ ಟೀಕಮಣಿ ಕಾಲೇಜಿನಲ್ಲಿ ಹೆಚ್ಚಿನ ವಿದ್ಯಾಭ್ಯಾಸಂಗವನ್ನು ಮಾಡಿಕೊಂಡು ದೇಶಕ್ಕೆ ಆಗಮಿಸಿ ಇಡೀ ಕರ್ನಾಟಕ ಆಂಧ್ರ ಪ್ರದೇಶದಲ್ಲಿ ಕೂಡ ಸಂಚರಿಸಿ ಅನೇಕ ಗ್ರಾಮಗಳಲ್ಲಿ ಸಭೆಗಳನ್ನು ಮಾಡಿ ಸಂಗೀತ ಸಾಹಿತ್ಯದೊಡನೆ ಬೊಧ ಮಾಡಿ ಅನೇಕ ಶಿಷ್ಯರನ್ನು ಸುಧಾರಿಸಿದ್ದಾರೆ. ಅನೇಕ ಗ್ರಾಮಗಳಲ್ಲಿ ವಾಚನಾಲಯಗಳನ್ನು ಹಾಗೂ ಭಜನಾ ಸಂಘಗಳನ್ನು ಸ್ಥಾಪನೆ ಮಾಡಿ ಬಳ್ಳಾರಿ ಜಿಲ್ಲಾ ಸಿರಗುಪ್ಪ ಗ್ರಾಮದಲ್ಲಿ ಪಾಠ ಶಾಲೆಯನ್ನು ಸ್ಥಾಪಿಸಿದರು. ಎಷ್ಟೋ ಜನ ವಿದ್ಯಾರ್ಥಿಗಳು ಅಭ್ಯಾಸ ಮಾಡಿ ಕೀರ್ತಿಕಾಯರಾಗಿರುವರು. ದಿನಾಂಕ ೨೮—೪—೧೯೬೧ ನೇ ಇಸ್ವಿ ದಿವಸ ಸ್ರೀ ಗೌರಿಶಂಕರ ಯಾತ್ರಾ ಮಹೋತ್ಸವಕ್ಕೆ ಸದರೀ ಶ್ರೀಗಳವರನ್ನು ಹೊರಡಿಸಿದಾಗ ಕಲಕತ್ತಾ, ಆಗ್ರಾ, ದಿಲ್ಲಿ, ಲಖನೌ, ಅಮೃತಸರ ಪಠಾಣಕೋಟ, ನಾಶೀಕ, ಉಜ್ಜಯನಿ, ಮದ್ರಾಸ, ಮುಂಬಯಿ, ಹರಿದ್ವಾರ ಶ್ರೀ ಕ್ಷೇತ್ರ ಕಾಶೀ ಪ್ರಯಾಗ ಸೊಲಾಪೂರ. ಪಂಢರಪೂರ ರಾಮೇಶ್ವರ. ತ್ರ್ಯಂಬಕೇಶ್ವರ ಮೊವಲಾದ ಪಟ್ಟಣಗಳಲ್ಲಿ ಸಭೆಗಳನ್ನು ಮಾಡಿ ಯಾತ್ರಿಕರಿಗೆ ವ್ಯಾಖ್ಯಾನ ಮಾಡಿ ಧರ್ಮ ಜಾಗ್ರತೆ ಮಾಡಿದ್ದಾರೆ. ಶ್ರೀ ಕೇದಾರ ಕ್ಷೇತ್ರ ಉಷಾಮಠ ಮೊದಲಾದ ಕ್ಷೇತ್ರಗಳನ್ನು ಸಂದರ್ಶನ ಮಾಡಿಕೊಂಡು ಬಂದಿದ್ದು ಶ್ಲಾಘನೀಯವೇ ಸರಿ. ಬೆಂಗಳೂರ, ಮೈಸೂರ, ತಿರುಪತಿ ಪಕ್ಷಿ ತೀರ್ಥ, ಕನ್ಯಾಕುಮಾರಿ, ಚಾಮುಂಡೇಶ್ವರಿ ಮಂದಿರ, ಕನ್ನಂಬಾಡಿ ಮೊದಲಾದ ದಕ್ಷಿಣ ದೇಶದ ಯಾತ್ರಕ್ಕೆ ಕೂಡ ದಯಮಾಡಿಸಿ ಎಲ್ಲ ಕಡೆಗೆ

ಸಭೆಗಳನ್ನು ಮಾಡಿ ಭೋಧ ಮಾಡಿದ್ದು ಶ್ಲಾಘನೀಯವೇ ಸರಿ ಇಂತಹ ಧರ್ಮೋನ್ನತಿಯ ಕಾರ್ಯಗಳಲ್ಲಿಯೇ ನಿರತರಾಗಿರುವದು. ಜಗತ್ ಪ್ರಸಿದ್ಧ ವಾಗಿದೆ. ಅನೇಕ ಕಡೆಗೆ ಅಯ್ಯಾಚಾರ ಭಕ್ತ ಸ್ತ್ರೀಪುರುಷರಿಗೆ ಶಿವ ದೀಕ್ಷೆ ಇವುಗಳನ್ನು ಧರ್ಮಾರ್ಥ ಮಾಡಿ ಹೆಸರುವಾಸಿಗಳಾದರು. ಪವಿತ್ರವಾದ ಶ್ರಾವಣ ಮಾಸದಲ್ಲಿ ಶ್ರೀ ರುದ್ರಾಭಿಷೇಕ ಹಾಗೂ ಪುರಾಣಗಳನ್ನು ಹಚ್ಚಿ ಬೋಧ ಮಾಡಿ ಭಕ್ತರನ್ನು ಪಾರಮಾರ್ಥಿಕ ಜ್ಞಾನಿಗಳನ್ನಾಗಿ ಮಾಡಿದ್ದಾರೆ. ಇವರು ಸಮಾಜದಲ್ಲಿ ಬೋಧ ಮಾಡಲಿಕ್ಕೆ ೨೫—೩೦ ವರ್ಷಗಳಾಗಿರ ಬಹುದ ಶ್ರೀ ಸನಾತ್ನ ಧರ್ಮ ಭೋಧ ಸರ್ಕೀಟನ್ನೇ ಹೊರಡಿಸಿ ಮಹಾ ಖ್ಯಾತಿಯನ್ನು ಪಡೆದ ಮಹಾನುಭಾವರು ಇವರೊಬ್ಬರೇ ಎಂದು ಬರೆದರೆ ಅತಿ ಶಯೋಕ್ತಿ ಆಗಲಾರದು ಚಿಕ್ಕಮಣ್ಣೂರ ಗುರುಪೀಠದ ಅಂಗವಾಗಿ ಗದಗ ಪಟ್ಟಣದಲ್ಲಿ ಶ್ರೀ ಜಗದ್ಗುರು ರೇಣುಕಾಚಾರ್ಯ ಆಶ್ರಮ ಅಥವಾ ಮಂದಿರ ದಿನಾಂಕ ೧೮—೫—೧೯೪೯ ನೇ ಇಸ್ವಿ ಬುಧವಾರ ದಿವಸ ಮುಳಗುಂದ ನಾಕಾದ ಹತ್ತರವೇ ಸ್ಥಾಪನೆ ಮಾಡಿರುವರು ಹಾಗೂ ಶ್ರೀ ಜಗದ್ಗುರು ರೇಣುಕಾಚಾರ್ಯ ಲಿಂಗೋಧ್ಭವ ಮಹಾ ಮೂರ್ತಿಯನ್ನು ದಿನಾಂಕ ೬—೫—೧೯೬೨ ನೇ ಇಸ್ವಿ ರವಿವಾರ ದಿವಸ ಶ್ರೀ ೧೦೦೮ ಜಗದ್ಗುರು ರಂಭಾ ಪುರಿ ಮಹಾ ಪೀಠದ ಪ್ರಸನ್ನ ರೇಣುಕ ವೀರ ಗಂಗಾಧರ ರಾಜೇಂದ್ರ ಶಿವಾ ಚಾರ್ಯ ಭಗವತ್ಪಾದರವರನ್ನು ದಯಮಾಡಿಸಿಕೊಂಡು ಪೂಜ್ಯರ ಅಮೃತ ಹಸ್ತದಿಂದಲೇ ಪ್ರತಿಷ್ಠಾಪನೆ ಮಾಡಿಸಿದರು. ಧಾರವಾಡ ಜಿಲ್ಹಾ ಹಾನಗಲ್ಲ ತಾಲೂಕ ಪೈಕಿ ಆಡೂರ ಗ್ರಾಮದಲ್ಲಿ ದಿನಾಂಕ ೨೬—೧—೧೯೬೨ ನೇ ಬುಧವಾರ ಶ್ರೀ ೧೦೦೮ ಜಗದ್ಗುರು ರೇಣುಕಾಚಾರ್ಯ ಮಂದಿರ ಸ್ಥಾಪನೆ ಮಾಡಿರುವರು. ಎಷ್ಟೊ ಜನಗಳ ವಿವಾಹ ಅಯ್ಯಾಚಾರ ಶಿವದೀಕ್ಷೆ ವೊದ ಲಾದ ಮಂಗಲಕಾರ್ಯಗಳು ಈಗಲೂ ಜರಗುತ್ತವೆ. ॥ ಅಸ್ತು ॥ ಶ್ರೀ ೧೦೦೮ ಜಗದ್ಗುರು ರಂಭಾಪುರಿ ಮಠ ಸ್ವಾಮಿಗಳವರು ಸಭೆಗಳಲ್ಲಿ ವ್ಯಾಖ್ಯಾ ನ ಮಾಡಿದಾಗ್ಯೆ ಇವರಿಗೇ ॥ಧರ್ಮಭೋಧ ಶಿರೋಮಣಿ ಎಂಬದಾಗಿಯೂ ಗುಂತಗಲ್ಲ ಸಭೆಯಲ್ಲಿ ಸಾಹಿತ್ಯದ ಮೇಲೆ ಭಾಷಣ ಮಾಡಿದ ಸಮಯದಲ್ಲಿ ಶ್ರೀಶೈಲ ಸಿಂಹಾಸನ ಶ್ರೀ೧೦೦೮ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾ ಚಾರ್ಯ ತಪೋನಿಧಿಗಳು ಆಚಾರ್ಯ ತತ್ವ ಪ್ರಚಾರಕವೆಂಬ ಪದವೀ—

ಪ್ರಧಾನ ಕೊಟ್ಟಿರುವದಲ್ಲದೆ ಶ್ರೀಶೈಲ ಕ್ಷೇತ್ರದಲ್ಲಿ ನವೀನವಾಗಿ ಕಟ್ಟಿಸಿರುವ ಶ್ರೀ ಜಗದ್ಗುರು ಪಂಡಿತಾರಾಧ್ಯ ಪೀಠದ ಪ್ರವೇಶ ಮಹೋತ್ಸವ ಸಮಯದಲ್ಲಿ ೨೦ ನೆಯ ವೀರಶೈವ ಮಹಾ ಸಭೆಯಲ್ಲಿ ವ್ಯಾಖ್ಯಾನ ಮಾಡಿದಾಗ ಶ್ರೀ ಜಗದ್ಗುರುಗಳವರು ದಿನಾಂಕ ೩—೧೨—೧೯೬೦ ನೇ ದಿವಸ ಸದ್ಧರ್ಮ ಪ್ರಚಾರಕ ಎಂಬ ಪದವಿಯನ್ನು ದಯಪಾಲಿಸಿದ್ದಾರೆ ಇನ್ನಾದರೂ ಅನೇಕ ಪದವಿಗಳನ್ನು ಪಡೆಯುತ್ತಲೇ ಇದ್ದಾರೆ. ಇಂತಹ ವಿಭೂತಿಗಳು ಸಮಾಜದಲ್ಲಿ ಪ್ರಾದುರ್ಭವಿಸುವದು ಮಹಾ ದುರ್ಲಭ ಯಾವದಕ್ಕಾದರೂ ಸುಕೃತ ಪುಣ್ಯಬೇಕು. ಇದೂ ಅಲ್ಲದೆ ಮಹಾನುಭಾವರಾದ ಶ್ರೀಗಳು ಎಷ್ಟೋ ಧನವನ್ನು ಖರ್ಚುಮಾಡಿ ॥ ಅನುಭವ ದರ್ಪಣ ಕಥಾಮೃತ ೧ ನೇ ಭಾಗ ೨ ನೇ ಭಾಗ ಗುರುವಚನಾಮೃತ ಭಜನಾ ಸ್ತೋತ್ರಾವಲಿ ಪೀಡಾ ಪರಿಹಾರ ನಾಮಾವಳಿ ಶ್ರೀಶೈಲ ಕ್ಷೇತ್ರದ ಮಹತ್ವ ಮೊದಲಾದ ಗ್ರಂಥಗಳನ್ನು ಮುದ್ರಣ ಮಾಡಿಸಿ ಹತ್ತುಸಾವಿರ ಗ್ರಂಥಗಳು ೧೫ ಸಾವಿರ ಮಹ ಸ್ವಾಮಿಗಳವರ ಫೋಟೋಗಳು ಪ್ರಚಾರ ಮಾಡೋಣವಾಗಿವೆ ಇವರ ಕೀರ್ತಿ ಲತೆಯು ಸಮಾಜದಲ್ಲಿ ಹೆಚ್ಚಾಗಿ ಬೆಳಗಲೆಂದು ಹಾರೈಸುವ.

ಧರ್ಮಕ್ಕಾಗಿ ಏಳಿರಿ. ಧರ್ಮಕ್ಕಾಗಿ ಆಳಿರಿ.

ಶ್ರೀ ವೇ। ಜಗದೀಶ ಶಾಸ್ತ್ರಿಗಳು.

ಧರ್ಮಕ್ಕಾಗಿ ಬಾಳಿರಿ. ಧರ್ಮಕ್ಕಾಗಿ ತಾಳಿರಿ.

---

## ಶ್ರೀ ಪರಶಿವನ ಕೈಲಾಸದಲ್ಲಿ ನಡೆದ ಸಭೆಯ ವರ್ಣನೆಯ ಸ್ತೋತ್ರ.

ರಂಜಿಸುವದು ಶಿವನ । ಸಭೆಯೂರಂಜಿಸುವದು ಶಿವನ ।
ಪರಿಶೋಭಿಸುವ । ಕೈಲಾಸದೊಳಗೇ ॥ಪ॥

ಯಡಬಲ ಭಾಗದೋಳ್ । ಯಸೆಯುವ ಗಣಪತಿ !
ಷಣ್ಮುಖನಿಂದ ಸದಾ । ಮೃಡನಡದೊಡಿಯೊಳೂ ಮಂದಹಾಸದಿಂದ ॥
ಕುಳಿತ ಗಿರಿಜಾ ದೇವಿಯಿಂದ ॥೧॥

ರೇಣುಕದಾರುಕ ಘಂಟಾಕರ್ಣ । ಮಧ್ಯದಿ ಶೋಭಿಸುವ ।
ಧೇನು ಕರ್ಣ ಮಹಾ । ವಿಶ್ವ ಕರ್ಣ ಗುರು ।
ಸಾರ್ವಭೌಮರಿಂದ ಸಭೆಯು ॥೨॥
ವೇದ ಚತುಷ್ಟಯೊಚ್ಚಾರಣ ಗೈಯ್ಯುವ । ಕಮಲೋದ್ಭವನಿಂದಾ ।
ಮೋದದಿ ಕುಳತಿಹ ಲಕ್ಷ್ಮೀ ನಾರಾ ।
ಯಣ ಸುರಪತಿಯಿಂದಾ ಸಭೆಯು ॥೩॥
ಶಿವ ಪಂಚಾಕ್ಷರಿ ಮಂತ್ರವ ಜಪಿಸುವ । ಪನುಮುನಿಗಣರಿಂದಾ ।
ಶಿವನ ಮಹಿಮೆಯು ಕೀರ್ತಿಸುವಂಥ ।
ನಾರದ ಮುನಿಯಿಂದಾ ಸಭೆಯು ॥೪॥
ನಿತ್ಯ ಮೃದಂಗವಬಾರಿಸುವಂಥ । ನಂದೀಶ್ವರನಿಂದಾ ।
ಅತ್ಯಾನಂದದೀ ವೀಣೆಯು ಬಾರಿಸು ।
ಅಂಥ ಸರಸ್ವತಿಯಿಂದ ಸಭೆಯು ॥೫॥
ಮಧುರ ಗಾನವ ಗೈಯ್ಯುವ ಗಂಧರ್ವರ ಸಂಚಯದಿಂದ ।
ವಿಧ ವಿಧದಿಂದಲೀ । ನರ್ತನ ಗೈಯುವ ।
ರಂಭಾದ್ಯಪ್ಸರರಿಂದ ಸಭೆಯು ॥೬॥
ಬಂಧುರಲಿಂಗಾಂಗೈಕ್ಯರ ಹಾಸ್ಯವ । ಭೋಧಿಪ ನಾಟಕದಿಂ ।
ಅಂದಿನ ಸಭಿಕರ ಆನಂದ ಗೊಳಿಸಿದ ।
ಭೃಂಗಿರಿಟೇಶ್ವರರಿಂದ ಸಭೆಯು ॥೭॥

ಶ್ರೀ ವೇ। ಪಂ। ಹರೀಶ್ವರ ಶಾಸ್ತ್ರಿ ಆರಾಧ್ಯ
ಮಠ ಸುಣಕಲ್ಲ ಬಿದರೀ ಕೃತ

---

## ಧರ್ಮ ಧ್ವಜ ಗೀತೆ

ಪಂಚರಂಗೀ ಝುಂಡಾ—

ಜಗಕೆ ಶಾಂತಿಯನು । ಭೀರುವದೀ ಧ್ವಜವು ।
ವೀರಶೈವರ ಪಂಚಪೀಠ । ಸಮುನ್ನ ತತ್ವವ ತೋರುವ ।
ಸಾರ ಪಂಚಾಚಾರ್ಯ ನಾಮುವ । ಸರ್ವರಿಗೆ ತಾ ಪೇಳುವ ।
ಚಲುವ ಮಹಿಮೆಯನು ಬೀರವದೀ ಧ್ವಜವೂ ॥೧॥

ಲಿಂಗವಂತರ ಲಿಂಗತ್ವವ ತಿರುಳ ಪ್ರೇಮದಿ ಸಾರುವ ।
ಮಂಗಲಾತ್ಮಕನಾದ ಶಂಭುವ । ಪಂಚಮುಖಗಳ ನರುಹುವ ।
ಹಿತದ ಕಾರಣದಿಂ । ಜಗಕೆ ಶಾಂತಿಯನು ॥೩॥

ಪಂಚಪ್ರಾಣವು ಪಂಚ ಕಲಿಶವು । ಪಂಚಕರ ಶಾಖೆಗಳು ಕೇಳ್ ।
ಪಂಚತತ್ವವು ಪಂಚ ಪಂಚಾತ್ಮಕದಿ ಸೃಷ್ಟಿಯು ನಿರ್ಮಿತಂ ।
ಹಿತದ ಸಾಧನವ । ಜಗಕೆ ಶಾಂತಿಯನು ॥೩॥

ವೀರಶೈವರು ಧರಿಪ ಲಿಂಗವು । ಪಂಚಸೂತ್ರದಿ ಕೂಡಿದೇ ।
ತೋರ ಪಂಚಾಕ್ಷರಿಯಐದಕ್ಕರವೆ ಶಾಂತಿಗೆ ಮೂಲವು ।
ಪರಮ ತೇಜವನೂ ಬೀರುವದೀ ಧ್ವಜವೂ ॥೪॥

ಮೋದವೀಯಲಿ ಪಾರ್ವತೀಶಗೆ । ಪ್ರಮಥ ಸಂಕುಲಕೀ ಧ್ವಜಾ ।
ಐದು ಬಣ್ಣಗಳಿಂದ ಸುಂದರವಾಗಿ ಸತತ ಮೆರೆಯಲೀ ।
ಶೈವತೇಜದಲೀ ಜಗಕೆ ಶಾಂತಿಯನೂ ॥೫॥

ಚಿಕ್ಕ ಮಣ್ಣೂರಲ್ಲಿ ರಾಜಿಸ । ರೇವಣಾರ್ಯರ ಧ್ವಜವಿದೂ ।
ಚೊಕ್ಕತನದಿಂ ಮೊರಬ ಪಾಲನ ಸತ್ಯ ಸತ್ಪಥತೊರ್ಪುದೂ ।
ಜಗಕೇ ಶಾಂತಿಯನು ಬೀರುವದೀ ಧ್ವಜವೂ ॥೬॥

ಶ್ರೀ ಬಾಲಬ್ರಹಸ್ಪತಿ ಶ್ರೀ ಗಂಗಾಧರ
ಶಿವಾಚಾರ್ಯ ಹಿರೇಮರಬ ಕೃತ

---

## ಇಷ್ಟಲಿಂಗದ ಸ್ತೋತ್ರ

ಮಾತಾಡು ಮಾತಾಡು ಲಿಂಗವೇ । ನೀ ಮಾತಾಡ ಹೋಗದಿರ ಲಿಂಗವೇ ।
ಗೋಕರ್ಣದಿಂದ ಯಾತ್ರಿಗೆ ನಾ ಬಂದೆ ಮಾತಾಡೋ ಕಾಶಿಯ ಲಿಂಗವೇ ॥
॥ಪಲ್ಲ॥

ಅಂಗೈಯ್ಯೊಳಾರುತಿ ಲಿಂಗವೆ । ಮುಂಗೈಯ್ಯೊಳು ಶಿವಗಂಟೆ ಲಿಂಗವೇ।
ಕಣ್ಣುಗಳೆರಡು । ಕೆಂದವರಿ ಪುಷ್ಪಗಳ ।
ನಿನಗೆ ತಂದರ್ಪಿಸುವೆ ಲಿಂಗವೇ ॥೧॥

ಮನವೇ ಮಜ್ಜನಸಾಲಿ ಲಿಂಗವೆ ।
ಮತ್ತೆ ತನುವೇ ಧೂಪಾರುತಿ ಲಿಂಗವೇ ಮನದೊಳಗಿರುವ ।
ಗೊನೆಯ ಹೊಂಬಾಳೆಯ ನಿನಗೆ ಕಂದರ್ಪಿಸುವೆ ಲಿಂಗವೇ ॥೨॥
ಕೋಳಿಕೂಗಿತಯ್ಯ ಲಿಂಗವೇ । ಮತ್ತೆ ಹೊತ್ತು ಏರಿತಯ್ಯ ಲಿಂಗವೇ ।
ಆರೆಂಟುಗಳಗೀಯ ಶಿವಪೂಜ ಮಾಡುವವನ ।
ಬಾಲನಾಗಿರಿಸಯ್ಯ ಲಿಂಗವೇ ॥೩॥
ಹೊತ್ತು ಆಯಿತಯ್ಯ ಲಿಂಗವೆ । ಮತ್ತೆ ಕತ್ತಲಾಯಿತಯ್ಯ ಲಿಂಗವೇ ।
ಹತ್ತೆಂಟುಗಳಗೀಯ । ಶಿವಪೂಜ ಮಾಡುವನ ।
ತಕ್ಷನಾಗಿರಿಸಯ್ಯ ಲಿಂಗವೆ ॥೪॥
ಅಣ್ಣಗೆ ಯಾರಿಲ್ಲ ಲಿಂಗವೇ ।
ಮತ್ತೆ ತಮ್ಮಗ ಯಾರಿಲ್ಲ ಲಿಂಗವೆ ।
ನಡು ಸಮುದ್ರದೊಳು ತೇಲುತ್ತ ಮುಣಗುತ್ತ ದಡವ ಮುಟ್ಟಿಸಯ್ಯ ಲಿಂಗವೆ ॥೫॥
ಯಾರಿದ್ದರೇನಯ್ಯ ಲಿಂಗವೆ ।
ಮತ್ತೆ ನಿನಗೆ ಯಾರಿದ್ದರೇನಯ್ಯ ಲಿಂಗವೆ ।
ಮಾರಹರನ ಕರುಣ ತಪ್ಪಿದ ಮೇಲೆ ಯಾರಿದ್ದರೇನಯ್ಯ ಲಿಂಗವೇ ॥೬॥

ನಾನೇಕೆ ಬಡವನಯ್ಯ ಎಂಬಂತೆ ಅಥವಾ ಅತ್ತಲಿತ್ತ ಪೋಗದಂತೆ ದಾಟಿ
ಶಿವಲಿಂಗ ಪೂಜಿಸಯ್ಯ । ಭವರೋಗವನ್ನು ಕಳೆವ ॥ಪ॥
ಚಿರ ಸೌಖ್ಯಕ್ಕಾಗಿ ಮುದಡಿ ! ಗುರು ಸೇವೆಯನ್ನು ಮಾಡಿ ।
ಗುರುಪಾದವನ್ನು ಸ್ಮರಿಸಿ । ಗುರು ಕರುಣದಿಂದ ಪಡೆದ ।
ಶಿವಲಿಂಗ ಪೂಜಿಸಯ್ಯ ॥೧॥
ಶಿವಲಿಂಗ ಪೂಜೆಯಿಂದ ! ಶಿವಲಿಂಗ ಧ್ಯಾನದಿಂದ ।
ಶಿವಲಿಂಗ ನೋಟದಿಂದ । ಶಿವಪದವ ಸಿಗುವದಯ್ಯಾ ।
ಶಿವಲಿಂಗ ಪೂಜಿಸಯ್ಯ ॥೨॥
ಶಿವಲಿಂಗ ಪೂಜೆಗೈದು । ಶಿವಶರಣರೆಲ್ಲ ಧರೆಯೊಳ್ ।
ಶಿವರೂಪದಿಂದ ಬಾಳೀ । ಶಿವಪದನ ಪಡೆದರಯ್ಯಾ ॥೩॥
ಶ್ರೀ ವೇ। ಪಂ। ಹರೀಶ್ವರ ಶಾಸ್ತ್ರಿ ಕೃತ

## .... ಮಂಗಲ ....

ಯಾಕ ಬರಲಿಲ್ಲವ್ವಾ ಹುಬ್ಬಳ್ಳಿಯಾವಾ ದಾಟಿ—

ಅಥವಾ— ನೀನೆ ಅಕ್ಕಾ ನಾನೆ ತಂಗಿ ಇಬ್ಬರೂ ಕೂಡೋಣ । ಅಥವಾ
ನೀನೆ ಅಣ್ಣಾ ನಾನೇ ತಮ್ಮ ಇಬ್ಬರು ಕೂಡೋಣ ।
ರೇಣುಕ ಗುರುವಿಗೆ ಗದಗಿನ ವಡೆಯಗೆ ಆರತಿ ಬೆಳಗೋಣ ॥ಪ॥

ಮಡಿಯನುಟ್ಟು ಭಸ್ಮ ಧರಿಸಿ ಸಾರಣೆ ಮಾಡೋಣ ।
ಮಡಿಯ ಹೊದಿಸಿ ಗದ್ದುಗೆ ಮೇಲೆ ಗುರುವಿನ ಇರಿಸೋಣ ।
ತಡಿಯದೆ ನಾವು ಜಾಗಟಿಯನ್ನು ಝುಣ ಝುಣ ಬಾರಿಸೋಣ ।
ಸಡಗರದಿಂದ ಮೀಸಲ ತುಪ್ಪದ ದೀಪ ಹಚ್ಚೋಣ ॥೧॥

ನಿಲ್ಲದೆ ಚಂದ್ರನ ಹೋಲುವ ಮುಖಕೆ ವಿಭೂತಿ ಧರಿಸೋಣ ।
ಮೆಲ್ಲಗೆ ಶ್ರೀ ರುದ್ರಾಕ್ಷ ಮಾಲೆಯ ಕೊರಳಿಗೆ ಧರಿಸೋಣ ।
ಮಲ್ಲಿಗೆ ಹೂವು ಬಿಲ್ವಪತ್ರಿ ಸೋಸಿ ಧರಿಸೋಣ ।
ಬಲ್ಲಿದ ಗುರುವಿಗೆ ಅಷ್ಟಗಂಧ ತಪ್ಪದೆ ಧರಿಸೋಣ !
ಉದಿನಕಡ್ಡಿ ಗುಗ್ಗುಳ ಕರ್ಪುರ ದೀಪ ಬೆಳಗೋಣ ॥೨॥

ಮೊದದಂದಿ ಕಡಲೆ ಬತ್ತಿ ದೀಪ ಬೇಗೋಣ ।
ಪಾದದ ಮೇಲೆ ರಂಗವರ್ಣದ ಅಕ್ಷತೆ ಧರಿಸೋಣ ।
ನಾದ ಮಾಡಿ ಮೂರು ಸಾರಿ ಘಂಟೆ ಬಾರಿಸೋಣ ।
ಮಂಗಲ ಮಾಡಿ ಕಾಯಿ ವಡೆದು ನೈವೇದ್ಯ ಮಾಡೋಣ ।
ಶೃಂಗಾರದಿಂದ ದಕ್ಷಿಣೆ ಕೊಟ್ಟು ಪ್ರದಕ್ಷಿಣೆ ಹಾಕೋಣ ।
ವಿಷಯ ದೂರಗೆ ದೀರ್ಘ ದಂಡ ವಂದನೆ ಮಾಡೋಣ ।
ಲಿಂಗರೂಪ ಗುರುವಿನೊಳಗೆ ಏಕವಾಗೋಣ ॥೩॥

---

## ಮಂಗಲ

ಹೋ ದೂರ ಜ್ಯಾನೆವಾಲೇ ಎಂಬಂತೆ—

ರೇವಣಸಿದ್ಧ ಬಾರೋ । ನೀ ಯನಗೆ ದಾರಿ ತೋರೋ ॥ಪ॥

ಸೋಮೇಶ ಲಿಂಗದಲ್ಲೀ । ಅವತರಿಸಿ ಬಂದೆ ನೀನೂ ।
ಮನಸೋತು ನಾನು ಬಂದೇ । ಮಾತಾಡೊ ಮಹಿಮ ಗುರುವೇ ॥೧॥

ಜಗಕೆಲ್ಲ ಗುರುವು ನೀನು । ಜಾತೀಯ ಬೇಧವಳಿದು ।
ಮೇಲೆ ಹೀನರಾಗಿ ನಮಗೇ । ಗತಿ ನೀನು ಹಿತದ ತಂದೆ ॥೨॥

ಕ್ಷಣಕ್ಷಣಕೆ ಚಲಿಸುತಿರುವ । ಮನವೆನ್ನ ನಲಿಸು ನೀನು ।
ಕಲಿಸೆನಗೆ ನಾಮ ಸ್ಮರಣೇ । ನೆಲಿಸೆನ್ನ ಹೃದಯದೊಳಗೇ ॥೩॥
ನೀಯನಗೆ ತಂದೆ ತಾಯೀ । ನೀಯನಗೆ ಬಂಧು ಬಳಗ ।
ಪತಿ ನೀನು ಹಿತದ ತಂದೇ ರೇವಣಸಿದ್ಧ ಬಾರೋ ॥೪॥

## ಶ್ರೀ ರಂಭಾಪುರಿ ಪೀಠದ ಸ್ತೋತ್ರ

ಗುರುವೇ ನಿಮ್ಮಯ ದಿವ್ಯನಾಮ ಜಪಮಂ। ಸದ್ಯಾನದಿಂ ಭಕ್ತಿಯಿಂ। ನಿರುತಂ ಮಾಳ್ಪನರೋತ್ತಮಂಗೆ ಸರಿಯಾರ್। ದೇವರ್ಕಳೊಳ್ ಮರ್ತ್ಯರೊಳ್ । ವರಮುಕ್ತಾಂಗನೆ ತಾನೆ ಕಾಮಿಸಿಕರಂಬರ್ಪಿಂದೆ ಬಂದಾತನಂ। ನೆರೆ ಬಾಲಿಂಗಿಸಿ ನಿತ್ಯ ಸೌಖ್ಯ ಕೊಡುವಳ್ । ರಂಭಾಪುರಾಧೀಶ್ವರಾ ॥

ಶ್ರೀ ವೇ। ಪಂ। ಜಗದೀಶ ಶಾಸ್ತ್ರಿಗಳು
ನಾಲ್ವಾರ ಗುರುಕುಲ ಪ್ರಧಾನಾಧ್ಯಾಪಕರು
ಸೊಲ್ಲಾಪೂರ ಕೃತ

## ದ್ವಾದಶ ಜ್ಯೋತಿರ್ಲಿಂಗ ಸ್ತೋತ್ರ

ಸೌರಾಷ್ಟ್ರೇ ಸೋಮನಾಥಂಚ । ಶ್ರೀಶೈಲೇ ಮಲ್ಲಿಕಾರ್ಜುನಂ ।
ಉಜ್ಜಯಿನ್ಯಾಂ ಮಹಾಕಾಲ । ವೊಂಕಾರ ಮಮಲೇಶ್ವರಂ ॥೧॥
ಪರಾಳ್ಯಾಂ ವೈಜನಾಥಂಚ । ಡಾಕಿನ್ಯಾಂ ಭೀಮಶಂಕರಂ ।
ಸೇತು ಬಂಧೇತು ರಾಮೇಶಂ । ನಾಗೇಶಂ ದಾರುಕಾವನೇ ॥೨॥
ವಾರಾಣಸ್ಯಾಂತು ವಿಶ್ವೇಶಂ । ತ್ರ್ಯಂಬಕಂ ಗೌತಮಿ ತಟೇ ।
ಹಿಮಾಲಯೇಷು ಕೇದಾರಂ । ಘುಶ್ಮೇಶಂ ಶಿವಾಲಯೇ ॥೩॥
ಏತಾನಿಜ್ಯೋತಿರ್ಲಿಂಗಾನೀ । ಸಾಯಂಪ್ರಾತಃ ಪಠೇನ್ನರಃ ।
ಸಪ್ತಜನ್ಮ ಕೃತಂಪಾಪಂ । ಸ್ಮರಣೇನ ವಿನಶ್ಯತಿ ॥೪॥

## ವಚನ

ಈಗಿನ ಕಾಲದ ಕೆಲಜನರಿಗೆ । ಧರ್ಮ ನೀತಿಗಳು ಬೇಕಿಲ್ಲವೋ ಸದಾ ಚರಣೆ ಶಿವಾರ್ಚನ ಕರ್ಮಾದಿಗಳಿಗೆ। ಶರಣು ಹೊಡೆದು। ಗುರು ಕೃಪೆಗೆ ಪಾತ್ರರಾಗದೆ । ದಾನ ಧರ್ಮಾದಿಗಳಿಗೆ ಮನಸು ಕೊಡದೆ । ಅನೀತಿ ಮಾರ್ಗದಿಂ

ನಡೆದು ಯಮಪುರಕೆ ಸಾಗುವರು । ಶ್ರೀ ಜಗದ್ಗುರು ರೇಣುಕಾಚಾರ್ಯರ ಭಜಿಸಿ ಮುಕ್ತರಾಗಿರೆಂದ । ಚಿಕ್ಕ ಮಣ್ಣೂರ ಗುರುರೇಣುಕ ದೇವ ॥

## ವಚನ

ಶಿವಪೂಜೆವೆಂದರೆ ವಲ್ಲೆನೆಂಬರು । ಗುರು ಸೇವೆಯೆಂದರೆ ಮೊದಲೇ ಬೇಡೆಂಬರು । ಲಿಂಗ ದೇವನಿಗೆ ಪತ್ರಿ ಪುಷ್ಪವನು ತಂದು ಧರಿಸಲಾರರು । ಹೀನರ ಸೇವೆ ಮಾಡಿ ಜೀವನ ಹರಿವರು । ಶಿವ ಶರಣರ ನುಡಿಗಳನು ಕೇಳ ಲಾರರು । ವಿಲಾಸಸೀಯರ ನುಡಿಯ ಕೇಳುವರು । ವಿದ್ಯಾಮಂದಿರಕೆ ಧರ್ಮ ಕೊಡುಯಂದರೆ ಕೈಯೇಳುವದಿಲ್ಲ । ದುರ್ನೀತಿಗೆ ಬೇಕಾದಷ್ಟು ಕೊಡುವರು ಗುರುಭಜಕೆ ಶಿವಭಜನೆಗೆ ಸೇರುವದಿಲ್ಲ । ಗುರು ಹಿರಿಯರ ಸೇವೆಗೆ ಹೋಗು ವದಿಲ್ಲ । ಎಮ್ಮೆಯ ಸೇವೆಯನು ಮಾಡಿ ರೊಕ್ಕವನ್ನು ಸಂಪಾದಿಸುವರು । ದಂಡ ದ್ರೋಹಕೆ ವಶರಾಗುವರು । ಇಂತಹ ಜನಕೆ ಶ್ರೀ ಜಗದ್ಗುರು ರೇಣು- ಕಾಚಾರ್ಯರ ಕೃಪೆಯಂದಿಗೆ ದೊರೆಯುವದು ನಾ ಕಾಣೆನೆಂದ । ಚಿಕ್ಕ- ಮಣ್ಣೂರ ಗುರು ರೇಣುಕ ದೇವ ॥

## ಶ್ರೀ ಗುರು ಸ್ತೋತ್ರ

ಪುರ ಹರ ನಿನಗಿನ್ನು ದಯಬಾರದೇಕೆ । ಈ ಭುವಿಯೊಳು ಜನಿಸಿ ಬಹು ಕಷ್ಟಕೆ ಗುರಿಯಾಗಿ ಬಡತನದಿಂದ ಬಳಲಿಬೆಂಡಾದರೂ । ನಿನ್ನ ಕೃಪೆ ಇಲ್ಲದೆ ಜೀವಿಸುವ ಬಗೆಯಂತೋ । ದೀನರು ಮಾಡುವ ಭಕ್ತಿ ಸ್ತೋತ್ರ- ಗಳನ್ನು ಕೇಳಿ । ಅವರ ಮೇಲೆ ನಿನ್ನ ಕರುಣಾಮೃತ ವಂಚಲ್ಲಿ । ಮೋಕ್ಷ ಪದವಿಯಂ ಕರುಣಿಸಬೇಕೆಂದ । ಚಿಕ್ಕ ಮಣ್ಣೂರ ಗುರು ರೇಣುಕ ದೇವ ॥

## ವೇದ ಪುಷ್ಪಾಂಜಲಿ

ಹರಃ ಓಂ ರಾಜಾಧಿ ರಾಜಾಯ ಪ್ರಸಹ್ಯ ಸಾಹಿನೇ । ನಮೋ ವಯಂ ವೈಶ್ರವಣಾಯ ಕುರ್ಮಹೇ । ಸಮೇ ಕಾಮಾನ್ ಕಾಮಕಾಮಾಯ ಮಹ್ಯಂ ಕಾಮೇಶ್ವರೋ ವೈಶ್ರವಣೋದ ಧಾತು । ಕುಬೇರಾಯ ವೈಶ್ರವಣಾಯ । ಮಹಾರಾಜಾಯ ನಮಃ ಇತಿ ವೇದ ಪುಷ್ಪಾಂಜಲಿಂ ಸಮರ್ಪಯಾಮಿ.

ಸಾಂಬ ಜೈನಮಃ ಪಾರ್ವತೀಪತೇ ಹರಹರ ಮಹಾದೇವ ॥

ಶ್ರೀ ಜಗದ್ಗುರು ಪಂಚಾಚಾರ್ಯ ಮಹಾರಾಜಕೀ ಜೈ.

## ಗುರು ತೀರ್ಥ ತೆಗೆದುಕೊಳ್ಳುವಾಗ ಅನ್ನುವ ಮಂತ್ರ

ಭೋಕಲ್ಯಾಣ ಮಹಾಭಾಗ। ಶಿವಜ್ಞಾನ ಮಹೋದಧೇ। ಆಚಾರ್ಯ ವರ್ಯ ಸಂಪ್ರಾಪ್ತಂ ರಕ್ಷಮಾಂ ಭವರೋಗಿಣಂ ॥

ಭವಭೂಜ ಕುಠಾರಾಯ। ಪಾದಪಂಕಸ್ಯ ಭಾನವೇ। ಅಜ್ಞಾನ ಗಿರಿವ ಜ್ರಾಯ। ಪಾದತೀರ್ಥಾಯತೇ ನಮಃ ॥

ಹರಹರ; ಕಾಲಹರ ಕರ್ಮಹರ ದುರಿತಹರ; ಪಾಪವೆಲ್ಲ ಪರಿಹರ ;। ಅಯ್ಯಾ ಸಾದ ಮಹಾ ಪ್ರಸಾದ ದೀಕ್ಷಗುರು; ಶೀಕ್ಷಗುರು ಗುರುವಿನ ಗುರು; ಪರಮಗುರು ಪರಮಾರಾಧ್ಯರ ಪಾದ ಪದ್ಮಂಗಳಿಗೇ ಶಿರಸಾಷ್ಟಾಂಗ ನಮಸ್ಕಾರ ಗುರುವೇ; ಗುರುಪಾದ ತೀರ್ಥ ತೆಗೆದುಕೊಳ್ಳುವದಕ್ಕೆ ಅಪ್ಪಣೆ ದಯ ಪಾಲಿಸಬೇಕು ಗುರುವೇ ॥

ಪ್ರತಿಯೊಂದು ಗ್ರಾಮಗಳಲ್ಲಿ ಶ್ರೀ ೧೦೦೮ ಜಗದ್ಗುರು ಪಂಚಾಚಾರ್ಯರ ಜಯಂತಿ ರಥೋತ್ಸವಾದಿಗಳ ಜಾತ್ರೆಗಳನ್ನು ಮಾಡಬೇಕು.

ಶ್ರೀ ರಂಭಾಪುರಿ ಪೀಠದ ಶ್ರೀ ಜಗದ್ಗುರು ರೇಣುಕಾಚಾರ್ಯರ ಜಯಂತಿಯು ಫಾಲ್ಗುಣ ಶುದ್ಧ ೧೩ ಮಘ ನಕ್ಷತ್ರ ಇದ್ದ ದಿವಸವೇ ಜಯಂತಿ ಇಡಬೇಕು.

ಶ್ರೀ ಜಗದ್ಗುರು ದಾರುಕಾಚಾರ್ಯರ ಜಯಂತಿ ವೈಶಾಖ ಶು ೫ ಉಜ್ಜಯಿನಿ ಪೀಠದ ಜಾತ್ರೆ ಸಹಿತ ಆಗುವದು.

ಹಿಮವತ್ಕೇದಾರ ಪೀಠದ ಶ್ರೀ ಜಗದ್ಗುರು ಏಕೋರಾಮರಾಧ್ಯರ ಜಯಂತಿ ವೈಶಾಖ ಶು ೩ ರಲ್ಲಿ ನಡೆಯುವದು

ಶ್ರೀಶೈಲ ಪೀಠ ಶ್ರೀ ಜಗದ್ಗುರು ಪಂಡಿತಾರಾಧ್ಯರ ಜಯಂತಿ ಮಾಘ ಬ॥ ಶಿವರಾತ್ರಿ ದಿನವೇ ಜಾತ್ರೆ ನಡೆಯುವದು.

ಶ್ರೀ ಕಾಶೀಕ್ಷೇತ್ರ ಪೀಠ ಶ್ರೀ ಜಗದ್ಗುರು ವಿಶ್ವಾರಾಧ್ಯರ ಜಯಂತಿ ಮಹಾಶಿವರಾತ್ರಿ ದಿವಸವೇ ಮಹಾವೈಭವದಿಂದ ನಡೆಯುವದು.

## ಅರ್ಘ್ಯದ ಸಾಮಾನುಗಳು.

ದರ್ಭೆ, ಬಿಳೀ ಎಳ್ಳು, ಬಿಳೀ ಸಾಸಿವೆ, ಜವೆ ಗೋದಿ, ನೆಲ್ಲು, ಆಕಳ ಹಾಲು.

## ಪಾದ್ಯದ ಸಾಮಾನುಗಳು

ಬಿಳಿ ಸಾಸಿವೆ, ಕೇಸರಿ, ಕರಿಕೆ, ಕೋಷ್ಠ, ಬಾಳದ ಬೇರು, ಪಚ್ಚ ಕರ್ಪೂರ.

## ಆಚಮನದ ಸಾಮಾನುಗಳು

ಜಾಜೀಕಾಯಿ, ಕಚೋರ, ಪಚ್ಚ ಕರ್ಪೂರ, ಕೋಷ್ಠ, ಕೇಸರಿ, ಯಾಲಕ್ಕಿ.

## ಪಂಚಾಮೃತ ಸಾಮಾನುಗಳು

ಆಕಳ ಹಾಲು, ಮಸರು, ತುಪ್ಪ, ಜೇನುತುಪ್ಪ, ಸಕ್ರಿ.

## ಮಧುಪರ್ಕ ಸಾಮಾನುಗಳು

ಆಕಳ ಹಾಲು, ಆಕಳ ಮಸರು, ಆಕಳ ತುಪ್ಪ, ಜೇನು ತುಪ್ಪ, ಸಕ್ರಿ, ಬಾಳೀಹಣ್ಣು,

## ಜಯಾಶೀರ್ವಾದ ಮಂತ್ರಗಳು

ಯಶಸ್ಕರಂ ಬಲವಂತಂ । ಪ್ರಭುತ್ವಂ ತ್ವಮೇವ । ರಾಜಾಧಿಪತಿರ್ಭ-ಭೂವ । ಸಂಕೇನನಾಗಾಂ ಸ್ವಪತಿರ್ಣರಾಣಾಂ ಸುಮಂಗಲ್ಯಂ ಸತತಂ ದಂಪತೀ :ರ್ದೀರ್ಘಮಾಯುಃ

ಸಂತ್ವಾ ಸಂಚಾಮಿಯಜುಷಾ । ಪ್ರಜಾಮಾಯುರ್ಧನಂತ। ದಂಪತ್ಯೋರ ವಿಚ್ಛಿನ್ನಾ ಪ್ರೀತಿ ರಸ್ತು ಸಂವತ್ಸರಂ ದೀರ್ಘಮಾಯುಃ

ಶತಮಾನಂಭವತಿ । ಶತಾಯುಃ ಪುರುಷ ಶತೇಂದ್ರಿಯಃ । ಆಯು-ಷ್ಯೇಂದ್ರಿಯೆ ಪ್ರತಿಷ್ಠತಿ ಶತ ಸಂವತ್ಸರಂ ದೀರ್ಘಮಾಯುಃ

---

॥ ಶ್ರೀ ನಮಃ ಪಂಚ ಜಗದ್ಗುರುಭ್ಯಃ ॥

ಧರ್ಮ ಗ್ರಂಥಕ್ಕೆ ಧನ ಸಹಾಯ ಮಾಡಿದವರು ಬಳ್ಳಾರಿ ಜಿಲ್ಲಾ ಪೈಕಿ ಹೊಸಪೇಟೆ ಗ್ರಾಮದ ಶ್ರೀಮಾನ್ ದೊಡ್ಡ ಜಂಬಣ್ಣನವರು ಜ್ಯಾಲಿ ಹಾಗೂ ಇವರ ಧರ್ಮ ಪತ್ನಿಯವರಾದ ಶ್ರೀ ಮಾತಾ ಚನ್ನಮ್ಮನವರು ಈ ದಂಪತಿಗಳು ಧರ್ಮ ಕಾರ್ಯಗಳಲ್ಲಿ ಧುರೀಣರು ಬ್ರಹ್ಮೋತ್ತರಖಂಡ ಕೊಟ್ಟೂರ

ಶರಣ ಬಸವೇಶ್ವರ ನಾಮಾವಳಿ ಗೌರೀಶಂಕರ ವೃತ ಮೊದಲಾದ ಗ್ರಂಥ ಗಳನ್ನು ಪ್ರಿಂಟು ಮಾಡಿಸಿ ಪ್ರಚಾರಗೊಳಿಸಿ ಸಮಾಜದಲ್ಲಿ ಒಳ್ಳೇ ಘನ-ವಾದ ಕೀರ್ತಿಯನ್ನು ಪಡೆದಿದ್ದಾರೆ. ॥ ಧರ್ಮ ಸುಖಾಯ ಮಹತೆ । ಎಂಬ ಶಾಸ್ತ್ರ ನೀತಿಯಂತೆ ಧರ್ಮವೇ ಪುಣ್ಯಾತ್ಮರ ಸುಖಕ್ಕೆ ಆಧಾರ ಸ್ತಂಭವಾಗಿರು ವದಲ್ಲದೆ ಮುಕ್ತಿಯನ್ನು ಕೊಡಲಿಕ್ಕೆ ಇದೇ ಮಾರ್ಗದರ್ಶಿಯಾಗಿರುವದು. ಉದಾರಿಗಳಾದ ಈ ದಂಪತಿಗಳು ಶ್ರೀಶೈಲ ಹಾಗೂ ಮಹಾ ನಂದೀ ಕ್ಷೇತ್ರ ಗಳ ಮಹತ್ವ ಎಂಬ ಗ್ರಂಥದ ಪ್ರಿಂಟಿಗೆ ಧನ ಸಹಾಯ ಮಾಡಿದ್ದಾರೆ. ಶ್ರೀ ಜಗದ್ಗುರು ಪಂಚಾಚಾರ್ಯರು ಸರ್ವೇಶ್ವರನಾದ ಪರಮಾತ್ಮನು ಇವರ ಶರೀರಕ್ಕೆ ಆರೋಗ್ಯ ಸುಖ ಸಂಪತ್ತು ಹೆಚ್ಚಾಗಿ ದಯಪಾಲಿಸಲೆಂದು ಅಪೇಕ್ಷಿಸುವ ಗ್ರಂಥಕರ್ತರು.

ಸಮಸ್ಥರು ಜಯಘೋಷ ಮಾಡಬೇಕು.

ಶ್ರೀ ಜಗದ್ಗುರು ಪಂಚಾಚಾರ್ಯ ಮಹಾರಾಜ ಕೀ ಜೈ.

ಶ್ರೀ ಜಗದ್ಗುರು ರೇಣುಕಾಚಾರ್ಯ ಮಹಾರಾಜಕೀ ಜೈ.

ಒಂದೇ ರೇಣುಕಂ

ಒಂದೇ ರೇಣುಕಂ

ಒಂದೇ ರೇಣುಕಂ

ಜಯ ನಮಃ ಪಾರ್ವತೀ–ಪತೇ ಹರಹರ ಮಹಾದೇವ.

— ಗ್ರಂಥ ಕುಸುಮ ಸಮಾಪ್ತಃ —

# ಶ್ರೀ ಜಗದ್ಗುರು ರೇಣುಕಾಚಾರ್ಯ ಆಶ್ರಮ ಸಂಸ್ಥೆಯಿಂದ ಪ್ರಕಟಿಸಲ್ಪಟ್ಟ ಗ್ರಂಥಗಳು



ಪ್ರತಿಯೊಬ್ಬರೂ ಅವಶ್ಯವಾಗಿ ಕರಿಸಿಕೊಂಡು ಓದಬೇಕಾದ ಅಪೂರ್ವ ಗ್ರಂಥ ! ಈ ಗ್ರಂಥವನ್ನು ಇಟ್ಟುಕೊಂಡರೆ ಪಂಡೀತರೇ ತಮ್ಮ ಮನೆಯಲ್ಲಿ ಇದ್ದಂತೆಂದು ತಿಳಿಯಿರಿ. ಎಲ್ಲರಿಗೂ ಸಹಿತ ಸರಳವಾಗಿ ತಿಳಿಯುವಂತೆ ಮೂಲ ಸಂಸ್ಕೃತಿಯ ಆಧಾರದ ಮೇಲೆ ರಚಿಸಲಾಗಿದೆ.

| ಗ್ರಂಥಗಳು | ರೂ. ಪೈಸೆ. |
|---|---|
| ಗುರುವಚನಾಮೃತ ೧ ನೇ ಭಾಗ | ೦—೫೦ |
| ಗುರುವಚನಾಮೃತ ೨ ನೇ ಭಾಗ | ೧—೦೦ |
| ಕಥಾಮೃತ | ೧—೦೦ |
| ಅನುಭವ ದರ್ಪಣ | ೨—೦೦ |
| ಭಜನಾ ಸ್ತೋತ್ರಾವಳಿ | ೦—೫೦ |
| ಶ್ರೀಗುರು ನಾಮಾವಳಿ | ೦—೫೦ |
| ಶ್ರೀರಂಭಾಪುರೀ ಪೀಠದ ಮಹತ್ವ | ೧—೦೦ |
| ಶ್ರೀಶೈಲ ಹಾಗೂ ಮಹನಂದಿ ಕ್ಷೇತ್ರ ಮಹತ್ವ | ೧—೦೦ |

ಗ್ರಂಥ ದೊರೆಯುವ ಸ್ಥಳ :

ಶ್ರೀ ಷ| ಬ್ರಹ್ಮ| ರೇವಣಸಿದ್ಧ ಶಿವಾಚಾರ್ಯ ಮಹಾಸ್ವಾಮಿಗಳು
ಶ್ರೀ ಜಗದ್ಗುರು ರೇಣುಕಾಚಾರ್ಯ ಮಂದಿರ ರೇಣುಕ ನಗರ ಗದಗ.

ಮತ್ತು

ಗದಗ ರೇಲ್ವೆ ಬುಕ್-ಸ್ಟಾಲ ಗದಗ.

ಚಂದ್ರಶೇಖರ ಪ್ರಿಂಟಿಂಗ ಪ್ರೆಸ್, ಗದಗ.